# ರವೀಂದ್ರರ ಕಥೆಗಳು



ಅನುವಾದಕರು

**ಅ. ನಾರಾಯಣಸ್ವಾಮಿ ಅಯ್ಯರ್**

ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು ನಗರ

**೧೯೪೪** **ಬೆಲೆ ೧ ರೂ.**

ಪ್ರಥಮ ಮುದ್ರಣ ೧೯೪೪



# ವಿಷಯಾನುಕ್ರಮಣಿಕೆ

# ಸ್ನಾನಘಟ್ಟದ ಹೇಳಿಕೆ

ಸಂಭವಿಸಿದ ಘಟನೆಗಳು ಪಾಷಾಣದ ಮೇಲೆ ಅಂಕಿತವಾಗುವುದಾಗಿ ದ್ದರೆ ಹಿಂದಿನ ಕಾಲದ ಅದೆಷ್ಟೋ ಕಥೆಗಳನ್ನು ನನ್ನ ಸೋಪಾನ ಸೋಪಾನ ಗಳಲ್ಲಿ ಓದುತ್ತಿದ್ದೆ. ಪುರಾತನ ಕಥೆಗಳನ್ನು ಕೇಳಲಿಚ್ಛಿಸುವುದಾದರೆ ನನ್ನ ಈ ಮೆಟ್ಟಲುಗಳ ಮೇಲೆ ಕುಳಿತುಕೊ. ಏಕಾಗ್ರತೆಯಿಂದ ನೀರಿನ ಕಲಕಲ ನಾದದೆಡೆಗೆ ಕಿವಿಗೊಡು. ಬಹು ದಿನಗಳ ವಿಸ್ಮೃತ ಕಥೆಗಳನ್ನೆಷ್ಟೋ ಕೇಳುವೆ.

ಒಂದು ದಿನದ ಘಟನೆಯು ನನಗೆ ನೆನಪಾಗುವುದು.. ಅದೂ ಇಂದಿ ನಂತಹ ದಿನವೇ. ಆಶ್ವಯುಜ ಮಾಸವು ಪ್ರಾರಂಭವಾಗಲು ಇನ್ನು ಮೂರು ನಾಲ್ಕು ದಿನಗಳು ಮಾತ್ರವೇ ಉಳಿದಿತ್ತು. ಬೆಳಗಿನ ಝಾವದಲ್ಲಿ ಅತಿ ಮಂದ ಮಧುರ ನವೀನ ಶೀತಲ ಮಾರುತವು ನಿದ್ರೆಯಿಂದ ಎಚ್ಚೆತ್ತವರಿಗೆ ನೂತನ ಪ್ರಾಣ ವನ್ನು ಕೊಡುತ್ತಿತ್ತು. ಮರದ ಚಿಗುರು ಹಾಗೇ ಸ್ವಲ್ಪಸ್ವಲ್ಪ ಹೊರಬರುತ್ತಿತ್ತು.

ತುಂಬು ಗಂಗೆ. ನನ್ನ ನಾಲ್ಕೇ ನಾಲ್ಕು ಮೆಟ್ಟಲುಗಳು ನೀರಿನಲ್ಲಿ ಮುಳುಗದೆ ಎದ್ದಿದ್ದವು. ನೀರಿಗೂ ನೆಲಕ್ಕೂ ತಿಕ್ಕಾಟ. ಮಾವಿನ ತೋಪಿನ ಅಡಿಯಲ್ಲಿ ಕೆಸವಿನ ದಂಟು ಬೆಳೆದಿರುವಲ್ಲಿಯವರೆಗೆ ಗಂಗೆಯ ನೀರು ಏರಿತ್ತು. ನದಿಯ ಈಚೆಯ ದಡದಲ್ಲಿ ಮೂರು ಪುರಾತನ ಪಾಳು ಕಟ್ಟಡ ಗಳು ನೀರಿನ ಮೇಲೆ ತಲೆಯೆತ್ತಿಕೊಂಡಿವೆ. ವಡದ ಬೂರಗದ ಮರಗಳಿಗೆ ಕಟ್ಟಿದ್ದ ಬೆಸ್ತರ ದೋಣಿಗಳು ಮುಂಜಾನೆಯ ಉಬ್ಬರದ ನೀರಿನಲ್ಲಿ ತೇಲಾ ಡುತ್ತ ಒಂದನ್ನೊಂದು ಉಜ್ಜುತ್ತಿದ್ದುವು. ಉಬ್ಬರ ಯೌವ್ವನದ ಕೆಂಪು ನೀರು ಆ ದೋಣಿಗಳ ಎರಡು ಪಾರ್ಶ್ವಗಳಲ್ಲೂ ಛಲಛಲ ಆಘಾತಮಾಡುತ್ತಲೂ, ಅವುಗಳ ಕಿವಿ ಹಿಡಿದು ಮಧುರ ಪರಿಹಾಸದಲ್ಲಿ ಅಲ್ಲಾಡಿಸುತ್ತಲೂ ಇತ್ತು.

ತುಂಬು ಗಂಗೆಯ ಮೇಲೆ ಬೀಳುವ ಶರತ್‌ಪ್ರಭಾತದ ಬಿಸಿಲಿನ ವರ್ಣವು ಅಪರಂಜಿ ಚಿನ್ನದಂತೆ, ಸಂಪಿಗೆಯ ಹೂವಿನಂತೆ, ಇತ್ತು. ಬಿಸಿಲಿನ ಈ ವರ್ಣ ವನ್ನು ಮತ್ತಾವ ಕಾಲದಲ್ಲೂ ಕಾಣಲು ಸಾಧ್ಯವಿಲ್ಲ. ಮರಳು ದಿಣ್ಣೆಗಳ

ಮೇಲೂ ಜೊಂಡುಗಳ ಮೇಲೂ ಬಿಸಿಲು ಬಿದ್ದಿತ್ತು. ' ಹುಲ್ಲುಗಾವಲಿನ ಎಲ್ಲ ಹೂವೂ ಇನ್ನೂ ಅರಳಿರಲಿಲ್ಲ. ಅಲ್ಲೊಂದು ಇಲ್ಲೊಂದು ಅರಳಲು ಆರಂಭ ವಾಗಿತ್ತು.

ಅಂಬಿಗರು ರಾಮನಾಮವನ್ನು ಜಪಿಸುತ್ತ ದೋಣಿಗಳನ್ನು ಬಿಚ್ಚಿದರು. ಬೆಳಗಿನ ಹೊಂಬೆಳಕಿನಲ್ಲಿ ರೆಕ್ಕೆಗಳನ್ನು ಹರಡಿಕೊಂಡು ಪಕ್ಷಿಗಳು ಆಕಾಶ ದಲ್ಲಿ ಹಾರುವಂತೆಯೇ ಸಣ್ಣಸಣ್ಣ ದೋಣಿಗಳು ಸಣ್ಣಸಣ್ಣ ಪಟಗಳನ್ನು ಹರಡಿಕೊಂಡು ಸೂರ್ಯಕಿರಣದಲ್ಲಿ ಹೊರಬಿದ್ದಿದ್ದವು. ಅವನ್ನು ನೋಡಿದರೆ ಪಕ್ಷಿಗಳೋ ಎಂದು ಭ್ರಮೆಯಾಗುತ್ತಿತ್ತು. ಅವುಗಳು ರಾಜಹಂಸಗಳಂತೆ ನೀರಿನ ಮೇಲೆ ತೇಲುತ್ತಿದ್ದುವು. ಅಂತು ಆನಂದದಿಂದ ತಮ್ಮ ರೆಕ್ಕೆಗಳನ್ನು ಆಕಾಶದಲ್ಲಿ ಹರಡಿಕೊಂಡಂತಿದ್ದುವು.

ಭಟ್ಟಾಚಾರ್ಯ ಮಹಾಶಯರು ಎಂದಿನ ಹೊತ್ತಿಗೆ ಸರಿಯಾಗಿ ದರ್ಭೆ ಮತ್ತು ಮಡಿಸಂಚಿಯೊಡನೆ ಸ್ನಾನಕ್ಕೆ ಬಂದರು. ಹೆಣ್ಣುಮಕ್ಕಳು ಒಬ್ಬೊಬ್ಬ ರಾಗಿ ಇಬ್ಬಿಬ್ಬರಾಗಿ ನೀರು ಒಯ್ಯಲು ಬಂದರು.

ಈ ಸಂಗತಿ ಅಷ್ಟು ಹಿಂದಿನ ಕಾಲದ್ದಲ್ಲ. ನಿಮಗೇನೋ ಬಹು ಹಳೆಯ ಕಾಲದ್ದೆಂದು ತೋರಬಹುದು. ಆದರೆ ನನಗೆ ಮಾತ್ರ ಮೊನ್ನೆ ಮೊನ್ನೆ ನಡೆದ ಘಟನೆಯಂತಿದೆ. ನನ್ನ ದಿನಗಳು ಗಂಗಾಪ್ರವಾಹದ ಮೇಲೆ ಆಡುತ್ತ ಆಡುತ್ತ ತೇಲಿಹೋಗುವಂತಿವೆ. ಬಹು ಕಾಲದಿಂದ ಸ್ಥಿರಭಾವದಲ್ಲಿ ಅವನ್ನೇ ನೋಡುತ್ತಿರುವೆನು. ಆದ್ದರಿಂದಲೇ ಕಾಲವು ಬಹು ದೀರ್ಘವೆಂದು ನನಗನಿಸದು. ನನ್ನ ಹಗಲಿನ ಬೆಳಕೂ ರಾತ್ರಿಯ ನೆರಳೂ ದಿನಂಪ್ರತಿ ಗಂಗೆಯ ಮೇಲೆ ಬೀಳುವವು. ಪುನಃ ಪ್ರತಿದಿನವೂ ಗಂಗೆಯ ಮೇಲಿಂದ ಅಳಿಸಿಹೋಗುವವು. ಅವುಗಳ ಪ್ರತಿಬಿಂಬವು ಎಲ್ಲೂ ಕಾಣಿಸದು. ಆದ್ದ ರಿಂದಲೇ ನಾನು ಮುದುಕನಂತೆ ಕಂಡರೂ ನನ್ನ ಹೃದಯದಲ್ಲಿ ಚಿರನವೀನತೆ ಯಿದೆ. ಬಹು ವರ್ಷಗಳ ನೆನಪಿನ ಪಾಚಿಯ ಭಾರದಲ್ಲಿ ಅಡಗಿ ನನ್ನ ಬೆಳಕು ನಂದಿಹೋಗಿಲ್ಲ. ದೈವವಶಾತ್ ಒಂದು ತುಂಡು ಪಾಚಿಯು ತೇಲಿಕೊಂಡು ಬಂದು ನನ್ನ ಮೈಗೆ ಅಂಟಿಕೊಳ್ಳುವುದು. ಪುನಃ ಪ್ರವಾಹದಲ್ಲಿ ತೇಲಿಕೊಂಡು ಹೊರಟು ಹೋಗುವುದು. ಹೀಗೆಂದು ಹೇಳಿ ಏನೂ ಇಲ್ಲವೆಂದು ಹೇಳುವುದೂ

ಸಾಧ್ಯವಿಲ್ಲ. ಹೊಳೆಯ ಪ್ರವಾಹಕ್ಕೆ ನಿಲುಕದೆಡೆಗಳಲ್ಲಿ ನನ್ನ ಬಿರುಕುಗಳಲ್ಲಿ ಹುಟ್ಟಿರುವ ಗಿಡಗೆಂಟೆ ಸೊಪ್ಪುಸದೆಗಳೇ ನನ್ನ ಪುರಾತನತ್ವದ ಸಾಕ್ಷಿಗಳು. ಅವೇ ಪುರಾತನ ಕಾಲವನ್ನು ಸ್ನೇಹಪಾಶದಲ್ಲಿ ಬಿಗಿದು ಚಿರಕಾಲ ಶ್ಯಾಮಲ ಮಧುರ ಚಿರನೂತನವನ್ನಾಗಿ ಮಾಡಿವೆ. ಗಂಗೆಯು ದಿನದಿನಕ್ಕೆ ನನ್ನಿಂದ ಒಂದೊಂದು ಮೆಟ್ಟಿಲಾಗಿ ಸರಿದುಹೋಗುತ್ತಿದ್ದಾಳೆ. ನಾನೂ ಒಂದೊಂದು ಮೆಟ್ಟಲಾಗಿ ಹಳಬನಾಗುತ್ತಿರುವೆನು.

ಚಕ್ರವರ್ತಿಗಳ ಮನೆಯ ಆ ಅಜ್ಜನು ಸ್ನಾನ ಮಾಡಿ ನಾಮನಾಮಕೀ ಧೋತ್ರ ಹೊದೆದು ನಡುನಡುಗುತ್ತ ಜಪಮಾಲೆಯನ್ನು ತಿರುವುತ್ತ ತಿರುವುತ್ತ ಮನೆಗೆ ಹೋಗುತ್ತಿರುವನು. ಚಕ್ರವರ್ತಿಯವರ ಮಾತಾಮಹಿಯು ಆಗ್ಗೆ ಇಷ್ಟೇ ಇಷ್ಟು ಸಣ್ಣ ಹುಡುಗಿಯಾಗಿದ್ದಳು. ಅವಳ ಒಂದು ಆಟವು ನನಗೆ ನೆನಸಿವೆ. ಪ್ರತಿ ದಿನವೂ ಒಂದು ಬೂರುಗದ ಎಲೆಯನ್ನು ಹೊಳೆಯ ನೀರಿನಲ್ಲಿ ತೇಲಿಬಿಡುತ್ತಿದ್ದಳು. ನನ್ನ ಬಲಗಡೆ ಒಂದು ಸುಳಿಯಿತ್ತು. ಎಲೆಯು ಅಲ್ಲಿ ತಿರುಗುತ್ತ ತಿರುಗುತ್ತ ತೇಲಿಹೋಗುತ್ತಿತ್ತು. ಅವಳು ಕೊಡವನ್ನು ಕೆಳಗಿಟ್ಟು ಅದನ್ನೇ ನೋಡುತ್ತ ನಿಲ್ಲುತ್ತಿದ್ದಳು. ಕೆಲವು ದಿನಗಳ ನಂತರ ಅವಳು ದೊಡ್ಡವಳಾಗಿ ತನ್ನದೊಂದು ಹುಡುಗಿಯನ್ನು ಕರೆದುಕೊಂಡು ನೀರಿಗೆ ಬರತೊಡಗಿದಳು. ಆ ಹುಡುಗಿಯೂ ಬೆಳೆದು ದೊಡ್ಡವಳಾದಳು. ಸಣ್ಣ ಪುಟ್ಟ ಹುಡುಗಿಯರು ನೀರೆರಚುತ್ತ ಚೇಷ್ಟೆ ಮಾಡಿದಾಗ ಅವಳು ಅವರನ್ನು ಗದರಿಸುತ್ತಿದ್ದಳು; ಮತ್ತು ಉತ್ತಮರಿಗೆ ಉಚಿತವಾದ ನಡತೆ ಕಲಿಸುತ್ತ ಇದ್ದಳು. ನನಗೆ ಹಿಂದಿನ ಬೂರಗದೆಲೆಯ ದೋಣಿಯ ನೆನಪಾಗಿ ಬಹು ನಗು ಬರುತ್ತಿತ್ತು.

ನಾನು ಹೇಳಬೇಕೆಂದೆಣಿಸುವ ಮಾತು ನೆನಪಾಗದು. ಒಂದನ್ನು ಹೇಳಹೊರಟರೆ ಮಧ್ಯೆ ಪ್ರವಾಹದಲ್ಲಿ ಮತ್ತೊಂದು ತೇಲಿಕೊಂಡು ಬರುವುದು. ವಿಷಯಗಳು ನೆನಪಾಗುವವು, ವಿಷಯಗಳು ಮರೆತುಹೋಗುವವು. ಹಿಡಿದು ನಿಲ್ಲಿಸುವುದು ಸಾಧ್ಯವಲ್ಲ. ಕೇವಲ ಒಂದೊಂದು ಸಂಗತಿ ಮಾತ್ರ ಬೂರುಗದ ಎಲೆಯ ದೋಣಿಯಂತೆ ಸುಳಿಯಲ್ಲಿ ಸಿಕ್ಕಿ ಎಡೆಬಿಡದೆ ಸುತ್ತಿಸುತ್ತಿ ಹಿಂದಕ್ಕೆ ಬರುವದು. ಅಂತಹದೇ ಒಂದು ಕಥೆಯು ತನ್ನ ಹೊರೆಯನ್ನು ಹೊತ್ತುಕೊಂಡು ಇಂದು ನನ್ನ ಬಳಿಗೆ ಅಡಿಗಡಿಗೆ ಬರುತ್ತಿದೆ. ಈಗಲೋ ಆಗಲೋ ಮುಳುಗೀತು. ಎಲೆಯಂತೆಯೇ ಅದು ಅತಿ

ಕಿರಿದಾದುದು. ಅವರಲ್ಲಿ ಹೆಚ್ಚಿನದೇನೂ ಇಲ್ಲ. ಕೇವಲ ಎರಡೇ ಎರಡು ಆಟದ ಹೂವುಗಳಿವೆ. ಅದು ಮುಳುಗಿದ್ದನ್ನು ಕಂಡರೆ ಕೋಮಲ ಬಾಲಿಕೆಯು ದೀರ್ಘ ನಿಟ್ಟುಸಿರನ್ನು ಬಿಟ್ಟು ಮನೆಗೆ ಹಿಂತಿರುಗುವಳು.

ದೇವಸ್ಥಾನದ ಹತ್ತಿರ ಆ ಗೋಸಾಯಿಗಳ ದನಗಳ ಕೊಟ್ಟಿಗೆಯ ಬೇಲಿ ಕಾಣಿಸುತ್ತಿದೆಯಲ್ಲಾ ಅಲ್ಲೊಂದು ಅರಳೀ ಮರವಿತ್ತು. ಅದರ ನೆರಳಲ್ಲೇ ವಾರಕ್ಕೊಮ್ಮೆ ಸಂತೆ ಸೇರುತ್ತಿತ್ತು. ಆಗ ಇನ್ನೂ ಈ ಗೋಸಾಯಿಗಳು ಇಲ್ಲಿ ಬಂದು ನೆಲೆಸಿರಲಿಲ್ಲ. ಈಗ ನಗರ ಚಂಡೀಮಂಟಪವು ಇದೆಯಲ್ಲವೆ ಅಲ್ಲೊಂದು ಇತ್ತು ಗುಂಡಾದ ತೋಪು.

ಇಂದು ನನ್ನ ಕಲ್ಲು ಎಲುಬು ಗೂಡುಗಳ ಮೇಲೆ ಕೈಹರಡಿ ವಿಕಾರವಾದ ಉದ್ದನೆಯ ಬೆರಳುಗಳಂತಹ ಬೇರುಗಳ ಮೂಲಕ ನನ್ನ ಮುರುಕಲು ಕಲ್ಲುಗಳನ್ನು ಬಲವಾಗಿ ಹಿಡಿಯಲ್ಲಿ ಅಮುಕಿ ಹಿಡಿದಿರುವ ಈ ಅರಳಿಯ ಮರವು ಆಗ ಕೇವಲ ಒಂದು ಸಣ್ಣ ಸಸಿಯಾಗಿತ್ತು. ಎಳೆಯ ಎಲೆಗಳೊಡನೆ ತಲೆಯೆತ್ತುತ್ತಿತ್ತು. ಬಿಸಿಲು ಏರಿದಾಗ ಇದರ ಎಲೆಗಳ ನೆರಳು ನನ್ನ ಮೇಲೆ ದಿನವೆಲ್ಲಾ ಆಡುತ್ತಿತ್ತು. ಇದರ ಹೊಸ ಬೇರುಗಳು ಮಗುವಿನ ಕೈಬೆರಳುಗಳಂತೆ ನನ್ನ ಎದೆಯ ಹತ್ತಿರ ಕಚಗುಳಿ ಕೊಡುತ್ತಿದ್ದುವು. ಇದರ ಎಲೆಯೊಂದನ್ನು ಯಾರಾದರೂ ಕಿತ್ತರೆ ನನಗೆ ವ್ಯಥೆಯಾಗುತ್ತಿತ್ತು.

ನನಗೆ ತಕ್ಕಮಟ್ಟಿಗೆ ವಯಸ್ಸಾಗಿದ್ದರೂ ಕೂಡ ನಾನಿನ್ನೂ ನೆಟ್ಟಗೇ ಇದ್ದೆನು. ಇಂದು ಬೆನ್ನೆಲುಬು ಅಷ್ಟಾವಕ್ರನಂತೆ ಬಗ್ಗಿ ಕುಗ್ಗಿದೆಯಲ್ಲವೆ? ನನ್ನ ಸಂದುಗಳಲ್ಲಿ ಪ್ರಪಂಚದ ಕಪ್ಪೆಗಳೆಲ್ಲಾ ತಮ್ಮ ಚಳಿಗಾಲದ ನಿದ್ರೆಯಲ್ಲಿ ಮಗ್ನವಾಗುತ್ತಿಲ್ಲವೆ? ಆಗ ನನಗಿನ್ನೂ ಇಂತಹ ದೆಸೆ ಬಂದಿರಲಿಲ್ಲ. ನನ್ನ ಎಡಗಡೆಯ ಹೊರನ್ಮೆಯಲ್ಲಿ ಮಾತ್ರ ಎರಡು ಇಟ್ಟಿಗೆಗಳಿರಲಿಲ್ಲ. ಆ ಸಂದಿಯಲ್ಲಿ ಒಂದು ಹಕ್ಕಿಯು ವಾಸಿಸುತ್ತಿತ್ತು. ಬೆಳಗಿನ ಝಾಮದಲ್ಲಿ ಅದು ಚಿಲಿಪಿಲಿಗುಟ್ಟುತ್ತಾ ಎಚ್ಚೆತ್ತಾಗ ಮೀನಿನ ಬಾಲದಂತಿದ್ದ ಅದರ ಜೋಡಿ ಬಾಲದ ರೆಕ್ಕೆಗಳನ್ನು ಒಂದೆರಡು ಸಲ ಕುಣಿಸಿ ಆಕಾಶದಲ್ಲಿ ವೇಗವಾಗಿ ಹಾರಿ ಹೋಗುತ್ತಿತ್ತು. ಆಗ ಕುಸುಮಳು ಸ್ನಾನಘಟ್ಟಕ್ಕೆ ಬರುವ ಸಮಯ.

ನಾನು ಯಾರ ಕಥೆಯನ್ನು ಹೇಳುವೆನೋ ಆ ಹುಡುಗಿಯನ್ನು ಘಟ್ಟಕ್ಕೆ ಬರುತ್ತಿದ್ದ ಇತರ ಹುಡುಗಿಯರು ಕುಸುಮ ಎಂದು ಕರೆಯುತ್ತಿದ್ದರು. ಅವಳ

ಹೆಸರು ಕುಸುಮ ಎಂದೇ ಇರಬೇಕು. ನೀರಿನ ಮೇಲೆ ಕುಸುಮಳ ನೆರಳು ಬಿದ್ದಾಗ ಆ ನೆರಳನ್ನು ಹಿಡಿದಿಡಬೇಕೆಂದು ನನಗನಿಸುತ್ತಿತ್ತು. ಆ ಛಾಯೆಯನ್ನು ನನ್ನ ಪಾಷಾಣದಲ್ಲಿ ಬಂಧಿಸಿ ಇಡಲು ಆಶೆಯಿತ್ತು. ಅವಳ ರೂಪದಲ್ಲಿ ಅಷ್ಟು ಮಾಧುರ್ಯವಿತ್ತು. ನನ್ನ ಪಾಷಾಣಗಳ ಮೇಲೆ ಅವಳು ಹೆಜ್ಜೆಯಿಟ್ಟಾಗ, ಅವಳ ಸೆರಗಿನಲ್ಲಿದ್ದ ಬೀಗದ ಕೈಗೊಂಚಲು ಶಬ್ದಮಾಡುತ್ತಿದ್ದಾಗ, ನನ್ನ ಮೈಯ ಪಾಚಿ ಮುಚ್ಚಿದ ಗಿಡಗಳು ಪುಲಕಿತವಾಗುತ್ತಿದ್ದುವು. ಕುಸುಮಳು ಹೆಚ್ಚಾಗಿ ಆಟವಾಡುವ ಅಥವಾ ಹರಟುವ ಇಲ್ಲವೇ ತಮಾಷೆ ಮಾಡುವ ಸ್ವಭಾವದವಳಲ್ಲ; ಆದರೂ ಆಶ್ಚರ್ಯದ ವಿಷಯವೆಂದರೆ ಅವಳಿಗಿದ್ದಷ್ಟು ಸಂಗಡಿಗರು ಮತ್ತಾರಿಗೂ ಇರಲಿಲ್ಲ. ದುಷ್ಟ ಹುಡುಗಿಯರು ಎಷ್ಟಿದ್ದರೋ ಅವರಾರಿಗೂ ಅವಳನ್ನು ಬಿಟ್ಟಿರಲು ಸಾಧ್ಯವಿಲ್ಲ. ಕೆಲವರು ಅವಳನ್ನು 'ಕೂಸೀ' ಎಂದೂ ಮತ್ತೆ ಕೆಲವರು 'ಖೂಷೀ'ಯೆಂದೂ, ಇನ್ನೂ ಕೆಲವರು 'ರಾಕ್ಕೂಸೀ' ಎಂದೂ ಕರೆಯುತ್ತಿದ್ದರು. ಅವಳ ತಾಯಿಯು ಅವಳನ್ನು 'ಕುಸುಮೀ' ಎಂದು ಕರೆಯುತ್ತಿದ್ದಳು. ಕುಸುಮ ಅಡಿಗಡಿಗೆ ನೀರಿನ ಬಳಿ ಕುಳಿತಿರುತ್ತಿದ್ದುದು ನನಗೆ ಕಾಣಿಸುತ್ತಿತ್ತು. ನೀರಿಗೂ ಅವಳ ಹೃದಯಕ್ಕೂ ವಿಶೇಷ ಸಂಬಂಧವಿತ್ತು. ಅವಳು ನೀರನ್ನು ಬಹುವಾಗಿ ಪ್ರೀತಿಸುತ್ತಿದ್ದಳು.

ಕೆಲವು ದಿನಗಳ ನಂತರ ಕುಸುಮಳು ಕಾಣಿಸಲಿಲ್ಲ. ಭುವನಳೂ ಸ್ವರ್ಣಳೂ ಆಗಾಗ್ಗೆ ಸೋಪಾನದ ಮೇಲೆ ಕುಳಿತು ಅಳುತ್ತಿದ್ದರು. ಅವರ ಕೂಸೀ - ಖೂಷೀ - ರಾಕ್ಕೂಸಿಯನ್ನು ಅತ್ತೆಯ ಮನೆಗೆ ಕರೆದುಕೊಂಡು ಹೋದರೆಂಬ ಸಂಗತಿಯನ್ನು ಕೇಳಿದೆನು. ಅವಳನ್ನು ಕರೆದುಕೊಂಡು ಹೋಗಿರುವರಲ್ಲ ಆ ಊರಿನಲ್ಲಿ ಗಂಗಾನದಿಯಿಲ್ಲವೆಂಬ ಸಂಗತಿಯನ್ನೂ ಕೇಳಿದೆನು. ಅಲ್ಲಿ ಅವಳಿಗೆ ಎಲ್ಲವೂ ಹೊಸದು. ಹೊಸ ಜನರು, ಹೊಸ ಮನೆ, ಹೊಸ ಹಾದಿಬೀದಿ. ನೀರಿನ ತಾವರೆಯನ್ನು ಕಿತ್ತು ನೆಲದ ಮೇಲೆ ನೆಡಲು ಎತ್ತಿಕೊಂಡು ಹೋದಂತಾಯಿತು.

ಕ್ರಮೇಣ ಕುಸುಮಳ ವಿಷಯವನ್ನು ಮರೆಯುತ್ತ ಬಂದೆ. ಒಂದು ವರ್ಷವಾಯಿತು. ಸ್ನಾನಘಟ್ಟಕ್ಕೆ ಬರುತ್ತಿದ್ದ ಹೆಣ್ಣುಮಕ್ಕಳೂ ಅವಳನ್ನು ಕುರಿತು ವಿಶೇಷವಾಗಿ ಮಾತನಾಡುತ್ತಿರಲಿಲ್ಲ. ಒಂದು ದಿನ ಸಂಜೆಯ ಹೊತ್ತಿ

ನಲ್ಲಿ ಬಹುಕಾಲ ಪರಿಚಿತವಾದ ಪಾದಗಳ ಸ್ಪರ್ಶ ಅಕಸ್ಮಾತ್ತಾಗಿ ಘಟಿಸಲು ಬೆಚ್ಚಿದೆನು. ಕುಸುಮಳ ಹೆಜ್ಜೆಯೆಂದು ಮನಸ್ಸಿಗೆ ತೋರಿತು. ಅವಳದೇ ದಿಟವಿರಬೇಕು. ಆದರೆ ಆ ಕಾಲಿನಲ್ಲಿ ಗೆಜ್ಜೆಯ ಶಬ್ದವಿರಲಿಲ್ಲ. ಕುಸುಮಳ ಹೆಜ್ಜೆಯ ಸ್ಪರ್ಶ ಮತ್ತು ಕಾಲ್ಕಡಗದ ಶಬ್ದ ಎರಡನ್ನೂ ನಾಲ್ಕು ಕಾಲ ಒಂದೆಡೆ ಯಲ್ಲಿ ಅನುಭವ ಮಾಡಿಕೊಂಡಿದ್ದೆ. ಇಂದು ಸಾಹಸಪಟ್ಟರೂ ಕೂಡ ಆ ಗೆಜ್ಜೆಯ ಶಬ್ದವನ್ನು ಕೇಳದೆ ಸಂಜೆಯ ಜಲಕಲ್ಲೋಲವು ವಿಷಣ್ಣ ವಾದಂತೆ ಕೇಳಿಸತೊಡಗಿತು. ಮಾವಿನ ತೋಪಿನಲ್ಲಿ ಎಲೆಗಳನ್ನು ಅಲು ಗಿಸುತ್ತಿದ್ದ ಮಂದಮಾರುತನ ಶಬ್ದವು ಅಳುವಿನಂತೆ ಕೇಳುತ್ತಿತ್ತು.

ಕುಸುಮಳು ವಿಧವೆಯಾಗಿರುವಳು. ಅವಳ ಗಂಡನು ಪರದೇಶದಲ್ಲಿ ಚಾಕರಿ ಮಾಡುತ್ತಿದ್ದನಂತೆ. ಒಂದೆರಡು ದಿನಗಳಿಗೆ ಹೆಚ್ಚು ಅವನೊಡನೆ ಭೇಟಿಯಾಗಿರಲಿಲ್ಲವಂತೆ. ಕಾಗದದ ಮೂಲಕ ವೈಧವ್ಯದ ಸುದ್ದಿ ಕೇಳಿ ಎಂಟು ವರ್ಷ ವಯಸ್ಸಿನಲ್ಲಿ ಬೈತಲೆಯ ಸಿಂಧೂರವನ್ನಳಿಸಿ ಮೈಮೇಲಿನ ಒಡವೆ ಗಳನ್ನು ಕಳೆದುಬಿಸುಟು ಪುನಃ ತಮ್ಮ ಊರಿಗೆ ಆ ಗಂಗೆಯ ಕರೆಗೆ ಹಿಂತಿರಿ ಗಿರುವಳು. ಆದರೆ ಅವಳ ಜೊತೆಗಾರ್ತಿಯರಲ್ಲೂ ಬಹುಜನರಿಲ್ಲ. ಭುವನಾ, ಸ್ವರ್ಣಾ, ಅಮಲಾ ಇವರುಗಳೂ ಅತ್ತೆಯ ಮನೆಗೆ ಹೋಗಿರುವರು. ಶರದಳು ಮಾತ್ರ ಇರುವಳು. ಬರುವ ಮಾಘಮಾಸದಲ್ಲಿ ಅವಳ ಮದುವೆಯೂ ನಡೆದುಹೋಗುವುದಂತೆ. ಕುಸುಮಳು ಸಂಪೂರ್ಣ ಒಬ್ಬೊಂಟಿಗಳಾಗಿಬಿಟ್ಟಿ ದ್ದಾಳೆ. ಆದರೆ ಅವಳು ಎರಡು ಮಂಡಿಗಳ ಮೇಲೆ ತಲೆಯನ್ನಿಟ್ಟುಕೊಂಡು ನನ್ನ ಮೆಟ್ಟಿಲಿನ ಮೇಲೆ ಕುಳಿತಿದ್ದಾಗ ನದಿಯ ಅಲೆಗಳೆಲ್ಲವೂ ಒಟ್ಟಿಗೆ ಸೇರಿ ಅವಳನ್ನು 'ಕೂಸೀ – ಖೂಷೀ – ರಾಕ್ಕೂಸೀ' ಎಂದು ಕರೆದು ಕೂಗುತ್ತಿದ್ದವು.

ಮಳೆಗಾಲದ ಆರಂಭದಲ್ಲಿ ಗಂಗೆಯು ದಿನೇದಿನೇ ನೋಡುತ್ತ ನೋಡುತ್ತ ತುಂಬುತ್ತಿತ್ತು. ಹಾಗೆಯೇ ಕುಸುಮಳೂ ನೋಡುನೋಡುತ್ತಿದ್ದ ಹಾಗೆಯೇ ದಿನೇದಿನೇ ಸೌಂದರ್ಯ ತುಂಬಿಕೊಂಡು ಬೆಳೆಯುತ್ತಿದ್ದಳು. ಆದರೆ ಅವಳ ಮಲಿನವಸ್ತ್ರ, ಕರುಣಾಜನಕ ಮುಖ ಮತ್ತು ಶಾಂತಸ್ವಭಾವ ಇವುಗಳು ಅವಳ ಯೌವನದ ಮೇಲೆ ಒಂದು ವಿಚಿತ್ರ ಛಾಯಾಮಯ ಆವರಣವನ್ನು ಸೃಷ್ಟಿ ಸಿದ್ದುದರಿಂದ ಆ ಅರಳಿದ ರೂಪವು ಸಾಮಾನ್ಯರ ದೃಷ್ಟಿಗೆ ಕಾಣಿಸುತ್ತಿರಲಿಲ್ಲ. ಕುಸುಮಳು ಬೆಳೆದಿರುವಳೆಂಬುದು ಯಾರಿಗೂ ಕಾಣುತ್ತಿರಲಿಲ್ಲ. ನನಗಂತೂ

ಅವಳು ಹಿಂದಿನ ಆ ಎಳೆಯ ಹುಡುಗಿಯೇ ಹೊರತು ದೊಡ್ಡವಳೆಂದು ಕಾಣಿ ಸಲೇ ಇಲ್ಲ. ಅವಳ ಕಾಲಿನಲ್ಲಿ ಗೆಜ್ಜೆಗಳಿರಲಿಲ್ಲ. ಆದರೆ ಅವಳು ನಡೆದಾಗ ನನಗೆ ಆ ಗೆಜ್ಜೆಯ ಶಬ್ದವು ಕೇಳಿಸುತ್ತಲಿತ್ತು. ಹೀಗೆಯೇ ಹತ್ತು ವರ್ಷಗಳು ಕಳೆದದ್ದು ಗ್ರಾಮದ ಜನರಲ್ಲಿ ಯಾರಿಗೂ ತಿಳಿಯಲಿಲ್ಲ.

ಇದೋ ಇಂದು ಕಾಣುತ್ತಿದೆಯಲ್ಲ ಹಾಗೆಯೇ ಆ ವರ್ಷವೂ ಭಾದ್ರ ಪದ ಮಾಸದ ಕೊನೆಯಲ್ಲಿ ಒಂದು ದಿನ ನಿಮ್ಮ ಮುತ್ತಜ್ಜಿಯರು ಅಂದಿನ ಮುಂಜಾನೆ ಎದ್ದು ಇಂದಿನಂತೆಯೇ ರವಿಯ ಮಧುರಬಿಂಬವನ್ನು ಕಂಡರು. ಅವರು ತಲೆಯ ಮೇಲೆ ಮುಸುಕುಹಾಕಿಕೊಂಡು ಬಿಂದಿಗೆಯನ್ನೆತ್ತಿಕೊಂಡು ನನ್ನ ಮೇಲೆ ಹರಡಿದ್ದ ಪ್ರಭಾತದ ಹೊಂಬೆಳಕನ್ನು ಇನ್ನೂ ಉಜ್ವಲಗೊಳಿ ಸಲು ಗಿಡಮರಗಳ ನಡುವಿನ ಹಳ್ಳದಿಣ್ಣೆಗಳ ರಸ್ತೆಯ ಮಾರ್ಗವಾಗಿ ಒಬ್ಬ ರೊಡನೊಬ್ಬರು ಮಾತನಾಡುತ್ತ ಬರುತ್ತಿದ್ದಾಗ ನಿಮ್ಮಗಳ ಕಲ್ಪನೆಯು ಅವರ ಮನಸ್ಸಿನ ಮೂಲೆಯಲ್ಲೂ ಮೂಡಿರಲಿಲ್ಲ. ನಿಮ್ಮ ಅಜ್ಜಿಯರೂ ನಿಮ್ಮಂತೆಯೇ ಒಂದು ದಿನ ಆಟವಾಡುತ್ತ ಓಡಾಡುತ್ತಿದ್ದರೆಂಬುದನ್ನು ನೀವುಗಳು ಹೇಗೂ ಊಹಿಸಿಕೊಳ್ಳಲಾರಿರಿ. ಈಗಿನ ದಿನಗಳು ಹೇಗೆ ಸತ್ಯವೂ ಜೀವಶಕ್ತಿಮಯವೂ ಆಗಿವೆಯೋ ಹಾಗೆಯೇ ಆ ಕಾಲವೂ ಸತ್ಯವಾಗಿ ಜೀವಶಕ್ತಿಮಯವಾಗಿ ಇತ್ತು. ಅವರುಗಳೂ ನಿಮ್ಮ ಹಾಗೆಯೇ ಎಳೆಯ ಹೃದಯದಲ್ಲಿ ಸುಖದುಃಖ ಗಳಿಂದ ತಲ್ಲಣಿಸಿ ತೂಗಾಡಿರುವರು. ಈ ಶರತ್ಕಾಲದ ದಿನವೂ ಅಂದಿ ನಂತೆಯೇ. ಆದರೆ ಅವರುಗಳಿಲ್ಲ. ಅವರುಗಳ ಸುಖದುಃಖದ ನೆನಪು ಲೇಶ ಮಾತ್ರವೂ ಇಲ್ಲದ ಶರತ್ಕಾಲದ ಸೂರ್ಯಕಿರಣದ ಆನಂದ ಚಿತ್ರವಿಂದಿನದು. ಹೀಗೆಲ್ಲ ಆಗುವುದೆಂದು ಅವರ ಊಹೆಗೂ ಅಗೋಚರವಾಗಿತ್ತು.

ಅಂದು ಬೆಳಗಿನ ಝಾವದಿಂದ ಉತ್ತರದ ಗಾಳಿಯು ಮಂದಮಂದ ವಾಗಿ ಬೀಸಲು ಆರಂಭವಾಗಿತ್ತು. ಆ ಗಾಳಿಯು ಅರಳತೊಡಗಿದ್ದ ಬಾಬಲೀ ಹೂಗಳಲ್ಲಿ ಅರ್ಘವನ್ನು ನನ್ನ ಮೇಲೆ ಉದಿರಿಸುತ್ತಿತ್ತು. ನನ್ನ ಶಿಲಾದೇಹದ ಮೇಲೆ ಸ್ವಲ್ಪಸ್ವಲ್ಪ ಶಿಶಿರದ ರೇಖೆಯು ಬಿದ್ದಿತ್ತು. ಅಂದಿನ ಬೆಳಗ್ಗೆ ಎಲ್ಲಿಂ ದಲೋ ಗೌರವರ್ಣದ ಸೌಮ್ಯ ಉಜ್ವಲ ಮುಖಕಾಂತಿಯ ದೀರ್ಘಕಾಯ ನಾದ ಯುವಕ ಸನ್ಯಾಸಿಯೊಬ್ಬನು ಬಂದು ನನ್ನ ಇದಿರಿನಲ್ಲಿರುವ ಈ ಶಿವಾ ಲಯದಲ್ಲಿ ನೆಲಸಿದನು. ಸನ್ಯಾಸಿಯು ಬಂದಿರುವ ಸುದ್ದಿಯು ಊರಲ್ಲೆಲ್ಲಾ

ಹರಡಿತು. ಹೆಂಗಸರು ಬಿಂದಿಗೆಗಳನ್ನು ಕೆಳಗಿಟ್ಟು ಸನ್ಯಾಸಿ ದೇವರಿಗೆ ನಮಸ್ಕಾರ ಮಾಡಲು ದೇವಾಲಯದೊಳಗೆ ಹೋಗಿ ನೆರೆದರು.

ದಿನದಿನಕ್ಕೆ ಗುಂಪು ಹೆಚ್ಚುತ್ತ ಬಂದಿತು. ಏಕಾಂಗಿ ಸನ್ಯಾಸಿ; ಅದರ ಮೇಲೆ ಒಳ್ಳೆ ಲಕ್ಷಣವಂತ. ಆತನು ಯಾರನ್ನೂ ಅವಹೇಳನ ಮಾಡುತ್ತಿರಲಿಲ್ಲ. ಮಕ್ಕಳನ್ನು ಎತ್ತಿ ತೊಡೆಯಲ್ಲಿ ಕೂರಿಸಿಕೊಳ್ಳುತ್ತಿದ್ದನು. ತಾಯಿಯರೊಡನೆ ಗೃಹಕೃತ್ಯದ ವಿಷಯವಾಗಿ ಮಾತನಾಡುತ್ತಿದ್ದನು. ನಾರೀಸಮಾಜದಲ್ಲಿ ಅವನ ಕೀರ್ತಿಯು ಅತ್ಯಲ್ಪಕಾಲದಲ್ಲಿ ಹರಡಿತು. ಅವನಲ್ಲಿಗೆ ಗಂಡಸರೂ ಹಲವರು ಬರುತ್ತಿದ್ದರು. ಅವನು ಒಂದು ದಿನ ಭಾಗವತವನ್ನು ಓದುತ್ತಿದ್ದನು. ಇನ್ನೊಂದು ದಿನ ಭಗವದ್ಗೀತೆಯನ್ನು ಓದಿ ಅರ್ಥ ಹೇಳುತ್ತಿದ್ದನು. ಮತ್ತೊಂದು ದಿನ ದೇವಾಲಯದಲ್ಲಿ ಕುಳಿತು ಹಲವು ಶಾಸ್ತ್ರಗಳ ವಿಷಯವಾಗಿ ಚರ್ಚೆ ಮಾಡುತ್ತಿದ್ದನು. ಕೆಲವರು ಅವನಿಂದ ಉಪದೇಶ ಹೊಂದಲು ಬರುತ್ತಿದ್ದರು. ಕೆಲವರು ಮಂತ್ರಗಳನ್ನರಿಯಲು ಬರುತ್ತಿದ್ದರು. ಕೆಲವರು ರೋಗಕ್ಕೆ ಔಷಧಗಳನ್ನು ತೆಗೆದುಕೊಂಡು ಹೋಗಲು ಬರುತ್ತಿದ್ದರು. ಹೆಂಗಸರು ಘಟ್ಟದಲ್ಲಿ ಬಂದು ಕುಳಿತು ಹೇಳಿಕೊಂಡರು—"ಅವನದೆಂತಹ ರೂಪ! ಮಹಾದೇವನೇ ಶರೀರ ಧರಿಸಿ ಆ ಮಂದಿರದಲ್ಲಿ ಬಂದು ಕುಳಿತಂತೆ ತೋರುತ್ತಿದೆ."

ಸನ್ಯಾಸಿಯು ಪ್ರತಿದಿನ ಬೆಳಗಿನ ಝಾವದಲ್ಲಿ ಬೆಳ್ಳಿಯು ಮೂಡುವ ವೇಳೆಯಲ್ಲಿ ಗಂಗೆಯಲ್ಲಿ ಸ್ನಾನಮಾಡಿ ಧೀರಗಂಭೀರ ಸ್ವರದಲ್ಲಿ ಸಂಧ್ಯಾವಂದನೆ ಮಾಡುತ್ತಿದ್ದಾಗ ನೀರಿನ ಕಲ್ಲೋಲವು ನನಗೆ ಕೇಳಿಸುತ್ತಿರಲಿಲ್ಲ. ಅವನ ಆ ಕಂಠಸ್ವರವನ್ನು ಕೇಳುತ್ತ ಕೇಳುತ್ತ ನಿತ್ಯವೂ ನದಿಯ ಮೂಡಣ ದಿಕ್ಕಿನ ಆಕಾಶವು ಕೆಂಪು ವರ್ಣವಾಗುತ್ತಿತ್ತು. ಮೋಡದ ನಡುನಡುವೆ ಅರುಣರೇಖೆಯು ಕಾಣಿಸುತ್ತಿತ್ತು. ಅಂಧಕಾರವು ಅರಳುವ ಮೊಗ್ಗಿನ ಮೇಲ್ಮಯ್ಯಂತೆ ಒಡೆದು ನಾಲ್ಕು ಕಡೆಯೂ ಇಳಿಯುತ್ತಿತ್ತು. ಆಕಾಶ ಸರೋವರದಲ್ಲಿ ಉಷಃಕುಸುಮದ ಕೆಂಬಣ್ಣವು ಸ್ವಲ್ಪಸ್ವಲ್ಪವಾಗಿ ಹೊರಹೊಮ್ಮುತ್ತಿತ್ತು. ಆಗ ನನ್ನ ಮನಸ್ಸಿಗೆ ಈ ಮಹಾಪುರುಷನು ಗಂಗಾನದಿಯಲ್ಲಿ ನಿಂತು ಪೂರ್ವದಿಕ್ಕಿಗೆ ತಿರುಗಿ ಯಾವುದೋ ಒಂದು ಮಹಾಮಂತ್ರವನ್ನು ಉಚ್ಚರಿಸುತ್ತಿರಲು ಅವರ ಒಂದೊಂದು ಶಬ್ದವು ಉಚ್ಚಾರವಾದ ಹಾಗೆಲ್ಲಾ ರಾತ್ರಿಯ

ದೋಷವು ಕಳೆಯುವುದು. ಚಂದ್ರತಾರೆಗಳು ಪಶ್ಚಿಮಕ್ಕಿಳಿದು ಸೂರ್ಯನು ಪೂರ್ವಾಕಾಶದಲ್ಲಿ ಮೂಡುವನೋ ಮತ್ತು ಪ್ರಪಂಚದ ನೋಟವು ಬದಲಾಯಿಸುವುದೋ ಎಂಬಂತೆ ತೋರುತ್ತಿತ್ತು. ಇವನಾರು ಮಾಯಾವಿ? ಸನ್ಯಾಸಿಯು ಸ್ನಾನಮಾಡಿದ ನಂತರ ಹೋಮಶಿಖೆಯಂತಹ ತನ್ನ ದೀರ್ಘ ಶುಭ್ರ ಪುಣ್ಯ ತನುವನ್ನು ನೀರಿನಿಂದ ಮೇಲೆತ್ತಿದಾಗ, ಅವನ ಜಟಾಜೂಟದಿಂದ ನೀರು ಹರಿಯುತ್ತಿತ್ತು. ಆಗ ಸೂರ್ಯನ ಎಳೆಬಿಸಿಲು ಅವನ ಸರ್ವಾಂಗದಲ್ಲೂ ಬಿದ್ದು ಪ್ರತಿಫಲಿತವಾಗುತ್ತಿತ್ತು.

ಹೀಗೆಯೇ ಕೆಲವು ತಿಂಗಳುಗಳು ಕಳೆದವು. ಚೈತ್ರಮಾಸದಲ್ಲಿ ಸೂರ್ಯಗ್ರಹಣದ ಸಮಯದಲ್ಲಿ ಬಹುಜನರು ನದಿಯ ಸ್ನಾನಕ್ಕಾಗಿ ಬಂದಿದ್ದರು. ಬೂರಗದ ಮರದಡಿಯಲ್ಲಿ ದೊಡ್ಡ ಪರಿಶೆ ಸೇರಿತ್ತು. ಈ ವೇಳೆಯಲ್ಲಿ ಸನ್ಯಾಸಿಯನ್ನು ನೋಡುವುದಕ್ಕೂ ಬಹುಜನರು ಬರತೊಡಗಿದರು. ಕುಸುಮಳ ಅತ್ತೆಯ ಮನೆಯಿದ್ದ ಊರಿನಿಂದಲೂ ಹಲವು ಹೆಂಗಸರು ಬಂದಿದ್ದರು.

ಸನ್ಯಾಸಿಯು ಬೆಳಗ್ಗೆ ಮೆಟ್ಟಿಲ ಮೇಲೆ ಕುಳಿತು ಜಪಮಾಡುತ್ತಿದ್ದನು. ಅವನನ್ನು ನೋಡಿದ ಒಬ್ಬ ಹೆಂಗಸು ಥಟ್ಟನೆ ಮತ್ತೊಬ್ಬಳ ಮೈಚಿಗುಟಿ, ಅದೋ 'ನಮ್ಮ ಕುಸುಮಳ ಗಂಡ!' ಎಂದಳು.

ಒಬ್ಬಳು ತಲೆಯ ಮುಸುಕನ್ನು ಎರಡು ಬೆರಳಿನಷ್ಟು ಓರೆಮಾಡಿ ಹಿಡಿದುಕೊಂಡು – 'ಅಮ್ಮಾ! ಅದೇ ಮತ್ತೆ – ನಮ್ಮ ಚಟರ್ಜಿಗಳ ಮನೆಯ ಚಿಕ್ಕ ತಮ್ಮ' ಎಂದಳು. ಮತ್ತೊಬ್ಬಳು ಮುಸುಕನ್ನು ಮತ್ತಷ್ಟು ಓರೆಮಾಡಿಕೊಂಡು 'ಅದೇ ಕಪಾಲ, ಹಾಗೇ ಮೂಗು, ಅಂತಹದೇ ಕಣ್ಣು' ಎಂದಳು.

ಮತ್ತೊಬ್ಬಳು ಸನ್ಯಾಸಿಯ ಕಡೆ ನೋಡದೆಯೇ ನಿಟ್ಟುಸಿರು ಬಿಡುತ್ತಾ ಬಿಂದಿಗೆಯ ನೀರನ್ನು ಚಲ್ಲುತ್ತಾ 'ಅದೆಲ್ಲಿ ಸಾಧ್ಯ? ಅವನು ಮತ್ತೆ ಬರುವನೇ? ಕುಸುಮಳ ಹಣೆಯಲ್ಲಿ ಹಾಗೆ ಬರೆದಿದೆಯೇ?' ಎಂದಳು.

ಆಗ ಒಬ್ಬಳು – 'ಅವನಿಗೆ ಇಷ್ಟು ದೊಡ್ಡ ಗಡ್ಡವಿರಲಿಲ್ಲ' ಎಂದಳು.

ಮತ್ತೊಬ್ಬಳು – 'ಅವನು ಇಷ್ಟು ಎತ್ತರವಿರಲಿಲ್ಲ' ಎಂದಳು. ಇನ್ನೊಬ್ಬಳು 'ಅವನು ಇವನಷ್ಟು ತೆಳ್ಳಗಿರಲಿಲ್ಲ' ಎಂದಳು.

ಹೀಗೆ ಈ ಸಂಗತಿಯು ಒಂದು ರೀತಿಯಲ್ಲಿ ಕೊನೆಗಂಡು ಪುನಃ ತಲೆಯೆತ್ತಲಿಲ್ಲ.

ಗ್ರಾಮದವರೆಲ್ಲರೂ ಸನ್ಯಾಸಿಯನ್ನು ನೋಡಿದ್ದರು. ಕೇವಲ ಕುಸುಮಳು ಮಾತ್ರ ನೋಡಿರಲಿಲ್ಲ. ಜನರ ಗುಂಪು ಹೆಚ್ಚಿದಾಗ ಕುಸುಮಳು ನನ್ನ ಹತ್ತಿರ ಬರುವುದನ್ನೇ ಬಿಟ್ಟಿದ್ದಳು. ಒಂದು ಹುಣ್ಣಿಮೆಯ ಸಂಜೆಯ ವೇಳೆಯಲ್ಲಿ ಚಂದ್ರನು ಮೂಡಿದ್ದನ್ನು ಕಂಡು ಅವಳಿಗೆ ಪ್ರಾಯಶಃ ನನ್ನ ನೆನಪಾಗಿರಬೇಕು.

ಆಗ ಘಟ್ಟದಲ್ಲಿ ಇನ್ನಾವ ಜನರೂ ಇರಲಿಲ್ಲ. ಜೀರುಂಡೆಗಳು ಚೀರುತ್ತಿದ್ದವು. ದೇವಸ್ಥಾನದಲ್ಲಿ ಕಂಚಿನ ಗಂಟೆ – ಜಾಗಟೆಗಳ ಶಬ್ದವು ಆಗತಾನೇ ನಿಂತಿತ್ತು. ಅವುಗಳ ಶಬ್ದತರಂಗವು ಮೆಲ್ಲಮೆಲ್ಲಗೆ ಕ್ಷಯಿಸಿ ನದಿಯ ಆಚೆಯ ದಡದ ಮಬ್ಬುಮಬ್ಬಾದ ವನಶ್ರೇಣಿಯ ನಡುವೆ ಛಾಯೆಯಂತೆ ಬೆರತಿತ್ತು. ತುಂಬಿದ ಬೆಳದಿಂಗಳು. ಉಬ್ಬರದ ನೀರು ಛಲ್‌ಛಲ್ ಎಂದು ಏರುತ್ತಿತ್ತು. ಕುಸುಮಳು ನನ್ನಮೇಲೆ ತನ್ನ ನೆರಳನ್ನು ಬೀಳಿಸಿ ಕುಳಿತಿದ್ದಳು. ಗಾಳಿಯು ವಿಶೇಷವಾಗಿರಲಿಲ್ಲ. ಗಿಡಮರಗಳು ನಿಶ್ಶಬ್ದವಾಗಿದ್ದುವು. ಕುಸುಮಳ ಇದಿರಲ್ಲಿ ಗಂಗಾವಕ್ಷದಲ್ಲಿ ತಡೆಯಿಲ್ಲದೆ ಹರಡಿದ್ದ ಬೆಳದಿಂಗಳು. ಕುಸುಮಳ ಹಿಂದೆ ಅಕ್ಕಪಕ್ಕದಲ್ಲಿ ಗುಂಪುಗುಂಪಾದ ಗಿಡಮರಗಳಲ್ಲಿ, ದೇವಸ್ಥಾನದ ನೆರಳಲ್ಲಿ, ಪಾಳುಮನೆಯ ಗೋಡೆಯ ಮರೆಯಲ್ಲಿ, ಪುಷ್ಕರಿಣಿಯ ತಟದಲ್ಲಿ ಮತ್ತು ತಾಳೆಯವನದಲ್ಲಿ ಕತ್ತಲೆಯು ಮೈಮುಚ್ಚಿಕೊಂಡು ಮುಖಕ್ಕೆ ಮುಸುಕುಹಾಕಿಕೊಂಡು ಕುಳಿತಂತಿತ್ತು. ಸಪ್ತಪರ್ಣಿಯ ಕೊಂಬೆಯಲ್ಲಿ ಕೀಚಬಾಲ ಹಕ್ಕಿಯು ಜೋಲಾಡುತ್ತಿತ್ತು. ಗುಡಿಯ ಶಿಖರದಲ್ಲಿ ಗೂಬೆ ಕುಳಿತು ಕೂಗಿಕೊಂಡಿತು. ನರಿಗಳ ಕೂಗು ಸುತ್ತಲ ಪ್ರಪಂಚದಲ್ಲಿ ಮೇಲಕ್ಕೆದ್ದು ಮತ್ತೆ ಅಡಗಿತ್ತು.

ಸನ್ಯಾಸಿಯು ಮೆಲ್ಲಮೆಲ್ಲನೆ ದೇವಸ್ಥಾನದ ಒಳಗಿಂದ ಹೊರಕ್ಕೆ ಬಂದನು. ಸ್ನಾನಘಟ್ಟಕ್ಕೆ ಬಂದು ಒಂದು ಮೆಟ್ಟಲನ್ನಿಳಿದು ಒಂಟಿಯಾಗಿ ಕುಳಿತಿದ್ದ ರಮಣಿಯನ್ನು ಕಂಡು ಹಿಂತಿರುಗುವ ಯೋಚನೆಯಲ್ಲಿದ್ದನು. ಆ ವೇಳೆಗೆ ಕುಸುಮಳು ಹಠಾತ್ತಾಗಿ ಮುಖ ಓರೆಮಾಡಿ ಹಿಂತಿರಿಗಿ ನೋಡಿದಳು.

ಅವಳ ತಲೆಯ ಮೇಲಿನಿಂದ ಬಟ್ಟೆಯು ಬಿದ್ದುಹೋಯಿತು. ಮೇಲ್ಮುಖವಾಗಿ ಅರಳಲಿರುವ ಹೂವಿನಮೇಲೆ ಬಿದ್ದ ಬೆಳದಿಂಗಳು ಹೇಗೆ ಶೋಭಿಸು

ವುದೋ ಹಾಗೆಯೇ ತಲೆಯೆತ್ತಿದೊಡನೆ ಕುಸುಮಳ ಮುಖದ ಮೇಲೆ ಬೆಳದಿಂಗಳು ಹೊಳೆಯಿತು. ಆ ಕ್ಷಣದಲ್ಲೇ ಇಬ್ಬರ ದೃಷ್ಟಿಯೂ ಕೂಡಿತು. ಒಬ್ಬರನ್ನೊಬ್ಬರು ನೋಡಿದರು. ಪರಸ್ಪರ ಪರಿಚಯವಾದಂತಾಯಿತು. ಹಿಂದಿನ ಜನ್ಮದ ಪರಿಚಯವಿದ್ದಂತೆ ಮನಸ್ಸಿಗೆ ತೋರಿತು.

ಗೂಬೆಯೊಂದು ಕೂಗುಹಾಕುತ್ತ ಅವಳ ತಲೆಯ ಮೇಲೆ ಹಾರಿ ಹೋಯಿತು. ಕುಸುಮಳು ಆ ಶಬ್ದದಿಂದ ಎಚ್ಚತ್ತವಳಾಗಿ ತನ್ನ ಸ್ಥಿತಿಯನ್ನು ಅರಿತು ತಲೆಯ ಮುಸುಕನ್ನು ಸರಿಪಡಿಸಿಕೊಂಡಳು. ಎದ್ದು ಸನ್ಯಾಸಿಯ ಕಾಲಿಗೆ ಅಡ್ಡಬಿದ್ದಳು.

ಸನ್ಯಾಸಿಯು ಆಶೀರ್ವಾದ ಮಾಡಿ ಕೇಳಿದನು – 'ನಿನ್ನ ಹೆಸರೇನು ?' ಅವಳು ಉತ್ತರಕೊಟ್ಟಳು – 'ನನ್ನ ಹೆಸರು ಕುಸುಮ.'

ಅಂದು ಮತ್ತೇನೂ ಮಾತುಕತೆ ನಡೆಯಲಿಲ್ಲ. ಕುಸುಮಳ ಮನೆಯು ಬಹು ಸಮೀಪದಲ್ಲೇ ಇತ್ತು. ಅವಳು ಮೆಲ್ಲನೆಮೆಲ್ಲನೆ ನಡೆದು ಮನೆ ಸೇರಿದಳು. ಸನ್ಯಾಸಿಯು ಅಂದಿನ ರಾತ್ರಿ ಬಹು ಹೊತ್ತಿನವರೆಗೆ ಸನ್ನ ಮೆಟ್ಟಿಲ ಮೇಲೆ ಕುಳಿತಿದ್ದನು. ಕೊನೆಗೆ ಪೂರ್ವದ ಚಂದ್ರನು ಪಶ್ಚಿಮದಿಕ್ಕಿಗೆ ಬಂದಾಗ ಸನ್ಯಾಸಿಯ ನೆರಳು ಅವನ ಇದಿರಿನಲ್ಲಿ ಬಿದ್ದಿತು. ಆಗ ಅವನೆದ್ದು ದೇವಸ್ಥಾನಕ್ಕೆ ಹೋದನು.

ಮರುದಿನದಿಂದ ಕುಸುಮಳು ದಿನಂಪ್ರತಿ ಬಂದು ಸನ್ಯಾಸಿಗೆ ನಮಸ್ಕರಿಸಿ ಹೋಗುತ್ತಿದ್ದಳು. ಸನ್ಯಾಸಿಯು ಶಾಸ್ತ್ರಗಳ ವ್ಯಾಖ್ಯಾನ ಮಾಡುತ್ತಿದ್ದರೆ ಅವಳು ಒಂದು ಪಕ್ಕದಲ್ಲಿ ನಿಂತು ಕೇಳುತ್ತಿದ್ದಳು. ಸನ್ಯಾಸಿಯು ಪ್ರಾತಸ್ಸಂಧ್ಯೆಯನ್ನು ಮುಗಿಸಿ ಕುಸುಮಳನ್ನು ಕರೆದು ಅವಳಿಗೆ ಧಾರ್ಮಿಕ ಉಪದೇಶ ಮಾಡುತ್ತಿದ್ದನು. ಅವಳಿಗೇನು ಅವನು ಹೇಳಿದ್ದೆಲ್ಲಾ ಅರ್ಥವಾಗುತ್ತಿತ್ತೇ? ಆದರೂ ಪೂರ್ಣ ಏಕಾಗ್ರತೆಯಿಂದ ಅವಳು ಸುಮ್ಮನೆ ಕುಳಿತು ಕೇಳುತ್ತಿದ್ದಳು. ಸನ್ಯಾಸಿಯು ಅವಳಿಗೆ ಏನು ಉಪದೇಶಮಾಡುತ್ತಿದ್ದನೋ ಅವಳು ಅದನ್ನು ಎಳ್ಳಷ್ಟೂ ತಪ್ಪದೆ ನಡೆಸುತ್ತಿದ್ದಳು. ನಿತ್ಯವೂ ಅವಳು ದೇವಸ್ಥಾನದ ಕೆಲಸ ಮಾಡುತ್ತಿದ್ದಳು. ದೇವರ ಸೇವೆಯಲ್ಲಿ ಆಲಸ್ಯ ತೋರಿಸುತ್ತಿರಲಿಲ್ಲ. ಪೂಜೆಗೆ ಹೂ ಕೊಯ್ದು ತಂದಿಡುವಳು. ಗಂಗೆಯಿಂದ ನೀರು ಹೊತ್ತು ತಂದು ಮಂದಿರವನ್ನು ತೊಳೆಯುತ್ತಿದ್ದಳು.

ಸನ್ಯಾಸಿಯು ಅವಳಿಗೆ ಹೇಳಿದ್ದನ್ನೆಲ್ಲಾ ಅವಳು ನನ್ನ ಮೆಟ್ಟಿಲ ಮೇಲೆ ಕುಳಿತು ಯೋಚಿಸುತ್ತಿದ್ದಳು. ಕ್ರಮೇಣ ಅವಳ ದೃಷ್ಟಿಯು ವಿಶಾಲವಾಯಿತು. ಹೃದಯದ ಬಾಗಿಲು ತೆರೆಯಿತು. ಅವಳು ಎಂದೂ ಕಾಣದುದನ್ನು ಕಾಣ ತೊಡಗಿದಳು. ಎಂದೂ ಕೇಳದುದನ್ನು ಕೇಳತೊಡಗಿದಳು. ಅವಳ ಮುಖದ ಮೇಲಿದ್ದ ಮ್ಲಾನಛಾಯೆಯು ದೂರವಾಯಿತು. ಅವಳು ಬೆಳಗಿನ ವೇಳೆಯಲ್ಲಿ ಭಕ್ತಿಭಾವದಿಂದ ಸನ್ಯಾಸಿಯ ಕಾಲ ಬಳಿ ನಮಸ್ಕರಿಸಿದಾಗ ದೇವರಡಿಯಲ್ಲಿ ಅರ್ಪಿಸಿದ ಶಿಶಿರಧೌತ ಪುಷ್ಪದಂತೆ ಶೋಭಿಸುತ್ತಿದ್ದಳು. ಒಂದು ಪವಿತ್ರ ಪ್ರಫುಲ್ಲತೆಯು ಅವಳ ಶರೀರವನ್ನೆಲ್ಲಾ ಬೆಳಕು ಮಾಡುತ್ತಿತ್ತು.

ಶೀತಕಾಲವು ಮುಗಿಯುವ ವೇಳೆಯಲ್ಲಿ ಶೀತದ ಗಾಳಿ ಬೀಸುವುದು. ಒಂದೊಂದು ದಿನ ಸಂಜೆಯ ವೇಳೆ ಹಠಾತ್ತಾಗಿ ದಕ್ಷಿಣದಿಕ್ಕಿನ ವಸಂತ ಮಾರುತವು ಮಂದಮಂದವಾಗಿ ಬೀಸುತ್ತಿತ್ತು. ಆಕಾಶದ ಹಿಮದ ಭಾರವು ಸಂಪೂರ್ಣವಾಗಿ ದೂರ ಸರಿಯುತ್ತಿತ್ತು. ಅನೇಕ ದಿನಗಳ ನಂತರ ಗ್ರಾಮ ದಲ್ಲಿ ಕೊಳಲಿನ ನಾದವು ಕೇಳುತ್ತಿತ್ತು. ಹಾಡಿನ ಲಹರಿಯೂ ಏಳುತ್ತಿತ್ತು. ಅಂಬಿಗರು ದೋಣಿಯನ್ನು ಪ್ರವಾಹದಲ್ಲಿ ತೇಲಿಬಿಟ್ಟು ಹುಟ್ಟುಗಳನ್ನು ತೆಗೆ ದಿಟ್ಟು 'ಶ್ಯಾಮ'ನ ಗುಣಗಾನ ಮಾಡುತ್ತಿರುವರು. ಪಕ್ಷಿಗಳು ರೆಂಬೆಯಿಂದ ರೆಂಬೆಗೆ ಹಾರುತ್ತ ಬಹು ಉಲ್ಲಾಸದಿಂದ ಒಂದರೊಡನೊಂದು ಮಾತುಕತೆ ನಡೆಸುತ್ತಿದ್ದವು.

ವಸಂತದ ವಾಯುವಿನ ಸ್ಪರ್ಶದಿಂದ ನನ್ನ ಕಲ್ಲೆದೆಯಲ್ಲೂ ಅಲ್ಪಸ್ವಲ್ಪ ಯೌವನದ ಸಂಚಾರವಾಯಿತು. ನನ್ನ ಹೃದಯದೊಳಗಿನ ಆ ನವ ಯೌವನೋಚ್ಛ್ವಾಸವನ್ನು ನೋಡಿಯೋ ಏನೋ ನನ್ನ ಆ ಗಿಡಗೆಂಟೆಗಳು ಹೂಬಿಟ್ಟು ಆನಂದಿಸುತ್ತಿದ್ದುವು. ಈ ವೇಳೆಯಲ್ಲಿ ಕುಸುಮಳನ್ನು ಮತ್ತೆ ಕಾಣುವುದು ಅಸಾಧ್ಯವಾಗಿತ್ತು. ಕೆಲವು ದಿನಗಳಿಂದ ಅವಳು ದೇವಾಲಯ ಕ್ಕಾಗಲೀ ಸನ್ಯಾಸಿಯ ಹತ್ತಿರಕ್ಕಾಗಲೀ ಬರುತ್ತಿರಲಿಲ್ಲ.

ಈ ನಡುವೆ ಏನು ನಡೆಯಿತೋ ನಾನರಿಯೆ. ಕೆಲವು ದಿನಗಳ ನಂತರ ಒಂದು ದಿನ ಸಂಜೆಯ ಹೊತ್ತಿನಲ್ಲಿ ನನ್ನ ಮೆಟ್ಟಿಲಿನ ಮೇಲೆಯೇ ಕುಸುಮ ಳಿಗೂ ಸನ್ಯಾಸಿಗೂ ಭೇಟಿಯಾಯಿತು.

ಕುಸುಮಳು ತಲೆ ಬಗ್ಗಿಸಿಕೊಂಡು—"ಸ್ವಾಮಿ! ನನ್ನನ್ನು ಕರೆಯ ಕಳುಹಿಸಿದ್ದರೋ?" ಎಂದಳು.

"ಹೌದು - ನಿನ್ನನ್ನು ಕಾಣಲೇ ಇಲ್ಲ. ಇತ್ತೀಚೆಗೆ ದೇವರ ಸೇವೆ ಯಲ್ಲಿ ನಿನಗಿಷ್ಟು ಅಲಕ್ಷ್ಯವೇಕೆ?"

ಕುಸುಮಳು ಮಾತನಾಡದೆ ಸುಮ್ಮನಿದ್ದಳು.

"ನಿನ್ನ ಮನಸ್ಸಿನಲ್ಲಿರುವುದನ್ನು ನನ್ನಲ್ಲಿ ಮರೆಮಾಚದೆ ಹೇಳು"— ಕುಸುಮಳು ಮುಖವನ್ನು ಸ್ವಲ್ಪ ಓರೆ ಮಾಡಿಕೊಂಡು 'ಸ್ವಾಮಿ! ನಾನು ಪಾಪಿಷ್ಟೆ. ಆದ್ದರಿಂದಲೇ ಈ ಅಪ್ರವೃತ್ತಿ' ಎಂದಳು.

ಸನ್ಯಾಸಿಯು ಅತ್ಯಂತ ಸ್ನೇಹಪೂರ್ಣ ಸ್ವರದೊಡನೆ—"ಕುಸುಮ, ನಿನ್ನ ಹೃದಯದಲ್ಲಿ ಅಶಾಂತಿಯು ನೆಲಸಿದೆ. ನಾನು ಅದನ್ನು ಅರಿತೆನು" ಎಂದನು.

ಕುಸುಮಳು ಬೆಚ್ಚಿದಳು. ಸನ್ಯಾಸಿಯು ಎಷ್ಟು ಸಂಗತಿಯನ್ನು ಅರಿತಿರುವನೋ ಎಂದು ಯೋಚಿಸತೊಡಗಿದಳು. ಅವಳ ಕಣ್ಣುಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ನೀರು ತುಂಬಿತು. ನಿಂತಲ್ಲಿಯೇ ಕುಳಿತಳು. ಮುಖವನ್ನು ಮುಚ್ಚಿಕೊಂಡು ಸನ್ಯಾಸಿಯ ಕಾಲಬಳಿ ಕುಳಿತು ಅಳತೊಡಗಿದಳು.

ಸನ್ಯಾಸಿಯು ಸ್ವಲ್ಪದೂರ ಸರಿದು "ನಿನ್ನ ಅಶಾಂತತೆಯ ಸಂಪೂರ್ಣ ವಿವರವನ್ನು ನನಗೆ ತಿಳಿಸು. ನಾನು ನಿನಗೆ ಶಾಂತಿಯ ಮಾರ್ಗವನ್ನು ತೋರಿಸುವೆನು" ಎಂದನು.

ಕುಸುಮಳು ಅತಿಭಕ್ತಿಯಿಂದ ಹೇಳಲಾರಂಭಿಸಿದಳು. ಆದರೆ ನಡು ನಡುವೆ ಅವಳ ಬಾಯಿಂದ ಮಾತು ಹೊರಡುವುದೇ ಕಷ್ಟವಾಗಿತ್ತು. "ನೀವು ಅಪ್ಪಣೆ ಕೊಡುವುದಾದರೆ ಅವಶ್ಯವಾಗಿ ಹೇಳುವೆನು. ಆದರೆ ನಾನು ವಿವರ ವಾಗಿ ಹೇಳಲು ಸಾಧ್ಯವಿಲ್ಲದವಳು. ತಾವು ಸಕಲವನ್ನೂ ಮನದಲ್ಲಿ ಅರಿತಿರುವಿರಿ ಎಂದು ನಾನು ಬಲ್ಲೆ. ಸ್ವಾಮಿ, ನಾನು ಒಬ್ಬರನ್ನು ದೇವರಂತೆ ಭಾವಿಸಿರುವೆನು. ನಾನವರನ್ನು ಪೂಜಿಸುತ್ತಿರುವೆನು. ಆ ಆನಂದದಲ್ಲಿ ನನ್ನ ಹೃದಯವು ಪರಿಪೂರ್ಣವಾಗಿತ್ತು. ಆದರೆ ಒಂದು ದಿನ ರಾತ್ರಿ ಅವರು ನನ್ನ ಹೃದಯದ ಒಡೆಯರೆಂದು ಕನಸು ಕಂಡೆನು. ಎಲ್ಲಿಯೋ ಒಂದು

ಬಕುಲವನದಲ್ಲಿ ಅವರು ಎಡಗೈಯಿಂದ ನನ್ನ ಬಲಗೈಯನ್ನು ಹಿಡಿದುಕೊಂಡು ಪ್ರೇಮದ ಮಾತುಗಳನ್ನು ಹೇಳುತ್ತಿದ್ದರು. ಈ ಘಟನೆಯು ನನಗೆ ಅಸಂಭವವೂ ಆಶ್ಚರ್ಯಕರವೂ ಎಂದೂ ತೋರಲಿಲ್ಲ. ಕನಸು ಕಳೆಯಿತು. ಆದರೂ ಕನಸಿನ ಮೋಡವು ಕಳೆಯಲಿಲ್ಲ. ಮರುದಿನ ಅವರನ್ನು ಕಂಡಾಗ ಮುಂಚಿನಂತೆ ಅವರು ನನ್ನ ಕಣ್ಣಿಗೆ ಕಾಣಿಸಲಿಲ್ಲ. ಮನದಲ್ಲಿ ಆ ಕನಸಿನ ಆ ಚಿತ್ರವು ನನ್ನಿಂದ ದೂರವಾಗಲಿಲ್ಲ. ಆಗಿನಿಂದ ನನ್ನ ಹೃದಯದ ಅಶಾಂತಿಯು ಆರಂಭವಾಯಿತು. ನನಗೆ ಎಲ್ಲೆಲ್ಲೂ ಕತ್ತಲೆ ಕವಿದಂತಿದೆ.''

ಕುಸುಮಳು ಕಣ್ಣೀರನ್ನು ಒರಸುತ್ತ ಒರಸುತ್ತ ಈ ಮಾತುಗಳನ್ನು ಹೇಳತ್ತಿದ್ದಾಗ ಸನ್ಯಾಸಿಯು ತನ್ನ ಬಲಗಾಲಿನ ಹೆಜ್ಜೆಯಿಂದ ನನ್ನನ್ನು ಬಲವಾಗಿ ಅದುಮಿದ್ದಂತೆ ನನಗನಿಸುತ್ತಿತ್ತು.

ಕುಸುಮಳ ಮಾತುಗಳು ಮುಗಿಯಲು ಸನ್ಯಾಸಿಯು 'ಕನಸಿನಲ್ಲಿ ಯಾರನ್ನು ಕಂಡೆಯೋ ಹೇಳಬಲ್ಲೆಯಾ?' ಎಂದನು.

ಕುಸುಮಳು ಕೈ ಮುಗಿದುಕೊಂಡು 'ಅದನ್ನು ಹೇಳಲಾರೆ' ಎಂದಳು.

ಸನ್ಯಾಸಿಯು "ನಿನಗೆ ಒಳ್ಳೆಯದಕ್ಕಾಗಿ ಕೇಳುವೆನು. ಹೇಳು" ಎಂದನು.

ಕುಸುಮಳು ತನ್ನ ಕೈಗಳನ್ನು ಮುಗಿದುಕೊಂಡು "ಆ ಸಂಗತಿಯನ್ನು ಹೇಳಲೇ ಬೇಕೆ?" ಎಂದಳು.

ಸನ್ಯಾಸಿಯು "ಹೌದು. ಹೇಳಲೇಬೇಕು" ಎಂದನು.

ಕುಸುಮಳು ತಕ್ಷಣ "ಸ್ವಾಮಿ, ಅದು ತಾವೇ'' ಎಂದಳು.

ಆ ಮಾತು ಅವಳ ಬಾಯಿಂದ ಹೊರಟಿತೋ ಇಲ್ಲವೋ ಆ ಕ್ಷಣವೇ ಅವಳು ಮೂರ್ಛಿತಳಾಗಿ ನನ್ನ ಕಠಿಣ ತೊಡೆಯ ಮೇಲೆ ಬಿದ್ದಳು. ಸನ್ಯಾಸಿಯು ಕಲ್ಲಿನ ವಿಗ್ರಹದಂತೆ ನಿಂತುಕೊಂಡಿದ್ದನು.

ಕುಸುಮಳು ಮೂರ್ಛೆಯಿಂದ ಎಚ್ಚೆತ್ತಾಗ ಸನ್ಯಾಸಿಯು ಮೆಲ್ಲಮೆಲ್ಲನೆ ಹೇಳಲಾರಂಭಿಸಿದನು—'' ನೀನು ನಾನು ಹೇಳಿದ್ದನ್ನೆಲ್ಲಾ ಪಾಲಿಸಿರುವೆ. ಮತ್ತೊಂದು ಮಾತನ್ನು ನಡೆಸಬೇಕು—ನಾನು ಇಂದೇ ಇಲ್ಲಿಂದ ಹೊರಟೆ.

ನನ್ನನ್ನು ನೀನು ನೋಡಲಾರೆ. ನನ್ನನ್ನು ನೀನು ಮರೆಯಲೇ ಬೇಕು. ಈ ಕೆಲಸವನ್ನು ಸಾಧಿಸಬಲ್ಲೆಯಾ ?" ಎಂದನು.

ಕುಸುಮಳು ಎದ್ದು ಸನ್ಯಾಸಿಯ ಮುಖವನ್ನು ನೋಡುತ್ತ ಸ್ವಲ್ಪ ಕಾಲ ನಿಂತಿದ್ದು, "ಸ್ವಾಮಿಾ, ಹಾಗೆಯೇ ಮಾಡುವೆನು" ಎಂದಳು.

ಸನ್ಯಾಸಿಯು "ಹಾಗಾದರೆ ನಾನು ಹೊರಡುವೆನು" ಎಂದನು.

ಕುಸುಮಳು ಮತ್ತೇನೂ ಮಾತನಾಡದೆ ಅವನಿಗೆ ನಮಸ್ಕರಿಸಿದಳು. ಸನ್ಯಾಸಿಯು ಹೊರಟುಹೋದನು.

"ಅವರನ್ನು ಮರೆಯಲೇ ಬೇಕು; ಅವರು ಆದೇಶ ಮಾಡಿ ಹೋಗಿದ್ದಾರೆ" ಎಂದು ಕುಸುಮಳು ಹೇಳುತ್ತಿದ್ದಳು. ಹೀಗೆ ಹೇಳುತ್ತ ಮೆಲ್ಲ ಮೆಲ್ಲಗೆ ಗಂಗೆಯ ನೀರಿನಲ್ಲಿ ಇಳಿದಳು.

ಅತಿ ಸಣ್ಣ ವಯಸ್ಸಿನಿಂದ ಅವಳು ಈ ನೀರಿನ ಬಳಿಯಲ್ಲೇ ಬೆಳೆದವಳು. ಕೊನೆಗಾಲದಲ್ಲಿ ಈ ನೀರೂ ಕೈ ನೀಡಿ ಅವಳನ್ನು ಮಡಿಲಲ್ಲಿ ಎತ್ತಿಕೊಳ್ಳದಿದ್ದರೆ ಮತ್ತಾರು ಎತ್ತಿಕೊಳ್ಳುವರು ? ಚಂದ್ರನು ಮರೆಯಾದನು. ರಾತ್ರಿಯಲ್ಲಿ ಕತ್ತಲೆ ಕವಿಯಿತು. ನೀರಿನ ಶಬ್ದವನ್ನು ಕೇಳಿದೆನು. ಮತ್ತೇನೂ ಅರಿಯಲಾರದೆ ಹೋದೆನು. ಕತ್ತಲೆಯಲ್ಲಿ ಗಾಳಿಯು ವೇಗವಾಗಿ ಬೀಸತೊಡಗಿತು. ಅಷ್ಟೋ ಇಷ್ಟೋ ಕಂಡೀತೆಂದು ಅದು ಆಕಾಶದ ನಕ್ಷತ್ರಗಳನ್ನು ಊದಿ ಹಾರಿಸಲು ಯತ್ನಿಸುವಂತಿತ್ತು.

ನನ್ನ ಮಡಿಲಲ್ಲಿ ಯಾರು ಆಡುತ್ತಿದ್ದಳೋ ಅವಳು ಇಂದು ತನ್ನ ಆಟವನ್ನು ಮುಗಿಸಿ ನನ್ನ ಮಡಿಲಿಂದ ಜಾರಿದಳೆಂಬುದರ ಅರಿವೇ ನನಗಿಲ್ಲವಾಯಿತು.

---

# ಪೋಸ್ಟ್ ಮಾಸ್ಟರ್

ಮೊದಲು ಕೆಲಸ ಆರಂಭ ಮಾಡಿದಾಗಲೇ ಉಲಾಪುರ ಗ್ರಾಮದ ಪೋಸ್ಟ್ ಮಾಸ್ಟರ್ ಆದೆನು. ಗ್ರಾಮವು ಅತಿ ಸಾಮಾನ್ಯ. ಹತ್ತಿರ ಹತ್ತಿರದಲ್ಲೇ ನೀಲೀ ಕೋಠಿಗಳಿದ್ದುವು. ಅದರಿಂದಲೇ ನೀಲಿ ಕೋಠಿಯ ಸಾಹೇಬರುಗಳು ಒಗ್ಗಟ್ಟಾಗಿ ಈ ಹೊಸ ಪೋಸ್ಟ್ ಆಫೀಸ್ ಸ್ಥಾಪನೆಮಾಡಿಸಿದ್ದರು.

ನಮ್ಮ ಪೋಸ್ಟ್ ಮಾಸ್ಟರು ಕಲ್ಕತ್ತೆಯ ಯುವಕ. ನೀರಿಲ್ಲದ ಮೀನನ್ನು ಎತ್ತಿ ದಡದಮೇಲೆ ಹಾಕಿದರೆ ಹೇಗಿರುವುದೋ ಹಾಗೆ ಈ ಕುಗ್ರಾಮಕ್ಕೆ ಬಂದ ನಮ್ಮ ಪೋಸ್ಟ್ ಮಾಸ್ಟರ ಅವಸ್ಥೆಯಾಗಿತ್ತು. ಕತ್ತಲೆಯಾದ ಹುಲ್ಲು ಹೊದಿಸಿದ ಮನೆಯಲ್ಲಿ ಆತನ ಆಫೀಸು. ಹತ್ತಿರದಲ್ಲೇ ಒಂದು ಪಾಚಿ ತುಂಬಿದ ಕೊಳ. ಅದರ ನಾಲ್ಕೂ ಕಡೆ ಕಾಡು. ಕೋಠಿಯ ಗುಮಾಸ್ತರು ಮತ್ತು ಇತರ ಕೆಲಸಗಾರರು ಪುರುಸತ್ತಿಲ್ಲದವರು ; ಅದೂ ಅಲ್ಲದೆ ಅವರು ಗೃಹಸ್ಥರ ಸಹವಾಸಕ್ಕೆ ಉಪಯುಕ್ತರಲ್ಲ.

ಮುಖ್ಯವಾಗಿ ಕಲ್ಕತ್ತೆಯ ಯುವಕರಿಗೆ ಜನರ ಸಂಗಡ ಕಲೆತು ಬೆರೆಯುವುದು ತಿಳಿಯದು. ಅಪರಿಚಿತ ಸ್ಥಳಗಳಿಗೆ ಹೋದರೆ ಉದ್ಧತರಾಗಿಯೋ ಅಥವಾ ಮೌನಿಗಳಾಗಿಯೋ ನಡೆದುಕೊಳ್ಳುವರು. ಈ ಕಾರಣದಿಂದ ಸ್ಥಳೀಯ ಜನರೊಡನೆ ಅವರ ಸಹವಾಸವಾಗುವುದು ಸಾಧ್ಯವಿಲ್ಲ. ಅಲ್ಲದೆ ಕೈಯಲ್ಲಿ ಹೆಚ್ಚು ಕೆಲಸವೂ ಆತನಿಗೆ ಇರಲಿಲ್ಲ. ಯಾವಾಗಲಾದರೊಮ್ಮೆ ಮನ ಬಂದರೆ ಒಂದೆರಡು ಕವನಗಳನ್ನು ಬರೆಯಲು ಯತ್ನಿಸುತ್ತಿದ್ದನು. ಅದರಲ್ಲಿ ಮೂಡಿದ್ದ ಭಾವನೆಗಳೇನು ಗೊತ್ತೆ—ಸಂಪೂರ್ಣ ದಿನವೆಲ್ಲಾ ಗಿಡಮರಗಳ ಕಂಪನ ಮತ್ತು ಆಕಾಶದ ಮೇಘವನ್ನು ನೋಡಿ ಮನಸ್ಸು ಶಾಂತವಾಗಿ ಜೀವವು ಹೊಂದಿದ ಆನಂದ. ಆದರೆ ನಿಜಸ್ಥಿತಿಯನ್ನು ದೇವರೇ ಬಲ್ಲ. ಅಕಸ್ಮಾತ್ತಾಗಿ ಅರೇಬಿಯನ್ ನೈಟ್ಸಿನ ಕಥೆಗಳ ಯಾವನಾದರೊಬ್ಬ ರಾಕ್ಷಸನು ಬಂದು ಈ ಗಿಡಮರಗಳನ್ನು ಸಮೂಲವಾಗಿ ಕಿತ್ತು ಆ ಸ್ಥಳದಲ್ಲಿ ಸಾಲುಸಾಲಾಗಿ ಆಕಾಶವನ್ನು ಮುಟ್ಟುವ ಉಪ್ಪರಿಗೆಗಳನ್ನು ಕಟ್ಟಿದರೆ ಮಾತ್ರ ಈ ಮೃತಪ್ರಾಯ ಪಟ್ಟಣಿಗನಿಗೆ ಪುನಃ ಹೊಸ ಹುಮ್ಮಸ್ಸು ಉತ್ಪತ್ತಿಯಾಗುತ್ತಿತ್ತು.

ಪೋಸ್ಟ್‌ಮಾಸ್ಟರನ ಸಂಬಳ ಅತಿ ಸಾಮಾನ್ಯ. ಸ್ವಂತವಾಗಿಯೇ ಬೇಯಿಸಿಕೊಂಡು ತಿನ್ನಬೇಕಾಗಿತ್ತು. ಗ್ರಾಮದ ತಾಯಿತಂದೆಗಳಿಲ್ಲದ ಅನಾಥ ಹುಡುಗಿಯೊಬ್ಬಳು ಅವನ ಕಸಮುಸರೆ ಮಾಡಿಕೊಡುತ್ತಿದ್ದಳು. ಅವಳಿಗೂ ಒಂದೆರಡು ತುತ್ತು ಅನ್ನ ಸಿಕ್ಕುತ್ತಿತ್ತು. ಹುಡುಗಿಯ ಹೆಸರು ರತ್ನ. ವಯಸ್ಸು ಹನ್ನೆರಡೋ ಹದಿಮೂರೋ ಇರಬಹುದು. ಅವಳಿಗೆ ಮದುವೆ ಯಾದೀತೆಂಬ ಭಾವನೆಯೆನೂ ಅಷ್ಟಾಗಿ ಕಾಣಿಸಲಿಲ್ಲ.

ಸಂಜೆಯಲ್ಲಿ ಗ್ರಾಮದ ಗೊಲ್ಲರ ಮನೆಯಿಂದ ಹೊಗೆಯು ಸುತ್ತಿ ಸುತ್ತಿ ಮೇಲೆ ಹೋಗುತ್ತಿತ್ತು. ಕಾಗೆಗಳು ಎಡೆಬಿಡದೆ ಕೂಗುತ್ತಿದ್ದವು. ದೂರದಲ್ಲಿ ಊರಾಚೆಯ ಹೆಂಡದ ಅಂಗಡಿಯಿಂದ ಅರ್ಧಮೈಮರೆತವರ ಬಾಯಿಂದ ಹೊರ ಡುತ್ತಿದ್ದ ಪದಗಳು ಕೇಳುತ್ತಿದ್ದವು. ಈ ಕತ್ತಲೆಯಲ್ಲಿ ಒಂಟಿಯಾಗಿ ಕುಳಿತು ಕುಳಿತು ಮರಗಳ ಅಲುಗಾಟವನ್ನು ನೋಡಿದರೆ ಕವಿಯ ಹೃದಯದಲ್ಲಿ ಸ್ವಲ್ಪ ನಡುಕವುಂಟಾಗುತ್ತಿತ್ತು. ಇಂತಹ ವೇಳೆಯಲ್ಲಿ ಮನೆಯ ಮೂಲೆಯಲ್ಲಿ ಒಂದು ಮಿಣುಕು ದೀಪವನ್ನು ಹಚ್ಚಿ ಪೋಸ್ಟ್‌ಮಾಸ್ಟರನು 'ರತನ' ಎಂದು ಕೂಗು ತ್ತಿದ್ದನು. ರತನಳು ಲಾಗಿಲಲ್ಲೇ ಕುಳಿತು ಈ ಕೂಗನ್ನು ಇದಿರು ನೋಡು. ತ್ತಿರುವಳು—ಆದರೆ ಒಂದುಸಲ ಕೂಗಿದ ಒಡನೆಯೇ ಮನೆಯೊಳಕ್ಕೆ ಬರು ತ್ತಿರಲಿಲ್ಲ. "ಏನು—ಬಾಬೂಜಿ. ಯಾಕೆ ಕೂಗುತ್ತೀರಿ" ಎನ್ನುವಳು. ಪೋಸ್ಟ್‌ಮಾಸ್ಟರ್ "ನೀನೇನು ಮಾಡುತ್ತಿರುವೆ."

ರತನ : ಈಗ ಒಲೆ ಹಚ್ಚಲು ಹೋಗಬೇಕು........ರ ಮನೆಗೆ.

ಪೋಸ್ಟ್‌ಮಾಸ್ಟರ್ ನಿಮ್ಮ........ರ ಮನೆಯ ಕೆಲಸ ಆಮೇಲೆ ಆಗಲಿ. ಮೊದಲು ಹುಕ್ಕಾ ಸಿದ್ಧಮಾಡಿಕೊಡು. ಅತಿ ಶೀಘ್ರದಲ್ಲಿ ಎರಡು ಕೆನ್ನೆಗಳನ್ನು ಉಬ್ಬಿಸಿಕೊಂಡು ಊದುತ್ತ ರತನಳು ಹುಕ್ಕವನ್ನು ಸಿದ್ಧಮಾಡಿ ತರುತ್ತಿದ್ದಳು. ಅವಳ ಕೈಯಿಂದ ಅದನ್ನು ತೆಗೆದುಕೊಂಡು ಪೋಸ್ಟ್‌ಮಾಸ್ಟರನು ಥಟ್ಟನೆ ಮಾತಿಗಾರಂಭಿಸುತ್ತಿದ್ದನು—"ರತ್ನಾ! ನಿಮ್ಮ ಅಮ್ಮನ ನೆನಪಿದೆಯೇ ?"

"ಅದು ಹಳೇ ಕಥೆ. ಅಷ್ಟೋ ಇಷ್ಟೋ ನೆನಪಿತ್ತು. ಅಷ್ಟು ಮರೆತು ಹೋಗಿತ್ತು. ಅಮ್ಮನಿಗಿಂತ ಅಪ್ಪನ ನೆನಪು ಚೆನ್ನಾಗಿತ್ತು ಅಮ್ಮನಿಗಿಂತ ಅಪ್ಪನೇ ಅವಳನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನು. ಅಪ್ಪನ ನೆನಪು ಸ್ವಲ್ಪ ಸ್ವಲ್ಪ ಇತ್ತು. ದುಡಿದು ದಣಿದು ಅಪ್ಪನು ಸಂಜೆಗೆ ಮನೆಗೆ ಬರುತ್ತಿದ್ದನು.

ಅವುಗಳಲ್ಲಿ ಒಂದೆರಡು ಸಂಜೆಯ ಘಟನೆಗಳು ಅವಳ ಮನಸ್ಸಿನಲ್ಲಿ ಚೆನ್ನಾಗಿ ನೆಲಸಿದ್ದವು. ಈ ಸುದ್ದಿಯನ್ನೆಲ್ಲಾ ಮಾತನಾಡುತ್ತ ಅವಳು ಪೋಸ್ಟ್ ಮಾಸ್ಟರ ಕಾಲಬಳಿ ನೆಲದಮೇಲೆ ಕುಳಿತುಕೊಳ್ಳುತ್ತಿದ್ದಳು. ಅವಳ ತಮ್ಮನ ವಿಷಯ ನೆನಪುಬರುತ್ತಿತ್ತು. ಬಹು ದಿನಗಳಿಗೆ ಮುಂಚೆ ಮಳೆಗಾಲದಲ್ಲಿ ಒಂದು ದಿನ ಸಂಜೆ ಅವರಿಬ್ಬರೂ ಅಗಸರ ಕಟ್ಟೆಯಲ್ಲಿ ಮೀನು ಹಿಡಿಯಲು ಯತ್ನಿಸುತ್ತಿದ್ದುದು ನೆನಪಿತ್ತು. ಇತರ ಮಹದ್ವಿಷಯಗಳಿಗಿಂತ ಆ ಸುದ್ದಿಯು ಅವಳಿಗೆ ಚೆನ್ನಾಗಿ ನೆನಪಿರುತ್ತಿತ್ತು. ಅಂತೂ ಈ ಮಾತುಕತೆಗಳ ಭರದಲ್ಲಿ ಹೊತ್ತು ಕಳೆದು ಆ ಮೇಲೆ ಪೋಸ್ಟ್ ಮಾಸ್ಟರಿಗೆ ಅಡಿಗೆಮಾಡುವ ಮನಸ್ಸಾಗುತ್ತಿರಲಿಲ್ಲ. ಬೆಳಗ್ಗೆ ಮಾಡಿದ್ದ ಪಲ್ಯವಿರುತ್ತಿತ್ತು. ರತನಳು ಹೋಗಿ ಒಲೆ ಹಚ್ಚಿ ನಾಲ್ಕು ರೊಟ್ಟಿ ಸುಟ್ಟುಕೊಂಡು ಬರುತ್ತಿದ್ದಳು. ಅದಷ್ಟರಿಂದಲೇ ಅವರಿಬ್ಬರ ರಾತ್ರಿಯ ಊಟವು ಮುಗಿಯುತ್ತಿತ್ತು.

ಒಂದೊಂದು ದಿನ ಈ ದೊಡ್ಡ ಹುಲ್ಲುಮನೆಯ ಆಫೀಸಿನ ಮೂಲೆಯಲ್ಲಿ ಕುಳಿತು ಪೋಸ್ಟ್‌ಮಾಸ್ಟರನು ತನ್ನ ಮನೆಯ ಸುದ್ದಿಯನ್ನು ರತ್ನಳಿಗೆ ಹೇಳುತ್ತಿದ್ದನು. ತಮ್ಮ, ತಾಯಿ ಮತ್ತು ಅಕ್ಕನ ಸುದ್ದಿ. ಪರಸ್ಥಳದಲ್ಲಿ ಒಂಟಿಯಾಗಿ ಕುಳಿತಿದ್ದಾಗ ಮನಸ್ಸಿನಲ್ಲಿ ಒಂದೊಂದಾಗಿ ಉದಯಿಸುತ್ತಿದ್ದ ಅವರ ಸವಿ ನೆನಪುಗಳು, ಸರ್ವದಾ ಮನಸ್ಸಿನಲ್ಲಿ ಮೂಡುವ ಭಾವನೆಗಳು ಮತ್ತು ನೀಲೀ ಕೋಠಿಯ ಗುಮಾಸ್ತೆಯರಿಗೆ ಹೇಳಲಾರದ ಸಂಗತಿಗಳು ಇವುಗಳೆಲ್ಲವನ್ನೂ ಈ ಓದುಬರಹವರಿಯದ ಹಳ್ಳಿಯ ಸಣ್ಣ ಹುಡುಗಿಗೆ ಹೇಳುತ್ತಿದ್ದನು. ಆ ಸಮಯದಲ್ಲಿ ಅವನ ಮನಸ್ಸಿನಲ್ಲಿ ಯಾವ ತರಹದ ಸಂಕೋಚವೂ ಇರುತ್ತಿರಲಿಲ್ಲ. ಕೊನೆಗೇನಾಯಿತು ಗೊತ್ತೇ? ಈ ಹುಡುಗಿಯು ಈತನ ಮಾತುಗಳನ್ನು ಕೇಳಿ ಅವನ ಮನೆಯವರನ್ನೆಲ್ಲ ಅಮ್ಮ, ಅಕ್ಕ ಅಣ್ಣ ಎಂದು ಕರೆಯಲಾರಂಭಿಸಿದಳು. ಅಷ್ಟೇ ಅಲ್ಲ. ಆ ಬಡ ಹುಡುಗಿಯು ತನ್ನ ಕ್ಷುದ್ರ ಹೃದಯದಲ್ಲಿ ಆ ವ್ಯಕ್ತಿಗಳ ಮೂರ್ತಿಯನ್ನು ಸೃಷ್ಟಿಸಿಕೊಂಡಿದ್ದಳು.

ಮಳೆಗಾಲದಲ್ಲಿ ಒಂದು ದಿನ ಮಧ್ಯಾಹ್ನ ಮೋಡವಿರಲಿಲ್ಲ. ಸ್ವಲ್ಪ ಬೆಚ್ಚಗೆ ಕೋಮಲವಾಗಿದ್ದ ವಾಯುವು ಚಲಿಸುತ್ತಿತ್ತು. ಬಿಸಿಲಿಗೆ ನೆನೆದ ಹುಲ್ಲು ಮತ್ತು ಗಿಡ ಸಸಿಗಳಿಂದ ಒಂದು ತರಹದ ವಾಸನೆ ಏಳುತ್ತಿತ್ತು. ದಣಿದ ಧರಿತ್ರಿಯ ಉಷ್ಣ ನಿಶ್ವಾಸವು ಮೈಮೇಲೆ ತಗಲುತ್ತಿದೆಯೋ ಎನ್ನು

ವಂತಿತ್ತು. ಎಲ್ಲಿಂದಲೋ ಒಂದು ಕ್ರೌಂಚ ಪಕ್ಷಿಯು ಬಂದು ತನ್ನ ದೀರ್ಘ ಸ್ವರದಿಂದ ಮಧ್ಯಾಹ್ನದಲ್ಲಿ ಪ್ರಕೃತಿಯೊಡನೆ ತನ್ನ ಕೊರತೆಯನ್ನು ಕರುಣ ಸ್ವರದಿಂದ ನಿವೇದಿಸಿಕೊಳ್ಳುವುದೋ ಎನ್ನುವಂತಿತ್ತು. ಪೋಸ್ಟ್ ಮಾಸ್ಟರಿಗೆ ಏನೇನೂ ಕೆಲಸವಿರಲಿಲ್ಲ. ಅಂದು ಮಳೆಗೆ ನೆನೆದು ಹೊಳೆಯುತ್ತಿದ್ದ ಗಿಡ ಸಸಿಗಳು, ಮಳೆಯ ಭಾರವನ್ನು ಕಳೆದುಕೊಂಡು ಹಗುರನಾಗಿ ಓಡುತ್ತಿದ್ದ ಮೇಘಗಳು, ಇವೆಲ್ಲವೂ ನೋಡಲರ್ಹವಾದ ದೃಶ್ಯಗಳಾಗಿದ್ದುವು. ಪೋಸ್ಟ್ ಮಾಸ್ಟರನು ಆ ರಮ್ಯ ದೃಶ್ಯವನ್ನು ನೋಡುತ್ತ ಯೋಚನೆಯಲ್ಲಿ ಮಗ್ನನಾಗಿ ದ್ದನು. ಈ ವೇಳೆಯಲ್ಲಿ ಹತ್ತಿರ ಯಾರಾದರೂ ತನ್ನವರಾಗಿ ಇರಬಾರದಿತ್ತೇ. ತನ್ನ ಹೃದಯದ ಭಾವನೆಗಳನ್ನು ತಿಳಿಸಲು ಒದಗುವ ಅಂತರಂಗ ಪ್ರೀತಿಯ ವ್ಯಕ್ತಿ ಯಾರಾದರೂ ಇರಬಾರದಿತ್ತೇ ಎಂದು ಅವನಿಗನಿಸಿತು. ಕ್ರಮೇಣ ಆ ಪಕ್ಷಿಯೂ ಅದೇ ಮಾತನ್ನು ಬಾರಿ ಬಾರಿಗೆ ಹೇಳುತ್ತಿವೆಯೆಂದು ಅವನಿಗನಿ ಸಿತು. ಈ ನಿರ್ಜನ ಪ್ರದೇಶದ ಮರದ ನೆರಳಲ್ಲಿ ಎಲೆಗಳ ಶಬ್ದವೂ ಹಾಗೆ ಅನ್ನುತ್ತಿರುವಂತೆ ಅವನಿಗೆ ತೋರಿತು. ಸಣ್ಣ ಗ್ರಾಮದ ಸಾಮಾನ್ಯ ಸಬ್ ಪೋಸ್ಟ್‌ಮಾಸ್ಟರ ಮನಸ್ಸಿನಲ್ಲಿ ಗಭೀರ ನಿಸ್ತಬ್ಧ ಮಧ್ಯಾಹ್ನದಲ್ಲಿ ರಜದ ದಿನದಲ್ಲಿ ಈ ತರಹದ ಭಾವನೆ ಉದಯಿಸಿತೆಂದುದನ್ನು ಯಾರೂ ನಂಬರು. ಮತ್ತೆ ಯಾರಿಗೂ ಅರಿಯಲು ಅಸಾಧ್ಯ.

ಪೋಸ್ಟ್‌ಮಾಸ್ಟರನು ದೀರ್ಘವಾಗಿ ನಿಟ್ಟುಸಿರುಬಿಟ್ಟು 'ರತನ' ಎಂದು ಕೂಗಿದನು. 'ರತನ'ಳು ಆಗ ಸೀಬೆಯಗಿಡದ ಕೆಳಗೆ ಪದ್ಮಾಸನ ಹಾಕಿಕೊಂಡು ಕುಳಿತು ಸೀಬೇಕಾಯಿ ತಿನ್ನುತ್ತಿದ್ದಳು. ಒಡೆಯನ ಗಂಟಲ ಧ್ವನಿಯನ್ನು ಕೇಳಿ ತಡವಿಲ್ಲದೆ ಓಡಿಬಂದಳು. ಮೇಲುಸುರು ಬಿಡುತ್ತ ಬಿಡುತ್ತ—"ಅಣ್ಣ ನವರೇ ಕರೆದಿರೇನು?"—ಎಂದಳು. ಆಗ ಪೋಸ್ಟ್‌ಮಾಸ್ಟರನು—"ನಿನಗೆ ನಾನು ಸ್ವಲ್ಪ ಸ್ವಲ್ಪವಾಗಿ ಓದುಬರಹ ಹೇಳಿಕೊಡುವೆನು" ಎಂದನು. ಆವ ತ್ತಿನ ಮಧ್ಯಾಹ್ನವೆಲ್ಲಾ ಅವಳಿಗೆ ಓನಾಮ ತಿದ್ದಿ ಹೇಳಿಕೊಡುವುದರಲ್ಲಿ ಕಳೆಯಿತು. ಮುಂದೆ ಕೆಲವು ದಿನಗಳಲ್ಲೇ ಅವಳಿಗೆ ಅಕ್ಷರಗಳನ್ನೂ ಕಾಗು ಣಿತವನ್ನೂ ಹೇಳಿಕೊಟ್ಟನು.

ಶ್ರಾವಣ ಮಾಸದಲ್ಲಿ ಮಳೆಗೆ ಕೊನೆಮೊದಲಿರದು. ಕೆರೆ, ಕೊಳ, ಹೊಳೆ ಎಲ್ಲವು ತುಂಬಿ ಕೋಡಿ ಹರಿಯುತ್ತಿದ್ದುವು. ಅಹೋರಾತ್ರಿ ಕಪ್ಪೆಗಳ

ಕೂಗು ಮತ್ತು ಮಳೆಯ ಶಬ್ದ. ಹಳ್ಳಿಯಿಂದ ಇತರ ಕಡೆಗಳಿಗೆ ಹೋಗುವ ದಾರಿಗಳೂ ಕೆಲವು ಪ್ರಯಾಣಕ್ಕೆ ಉಪಯೋಗವಾಗುವಂತಿರಲಿಲ್ಲ. ಸಂತೆ, ಪೇಟೆಗಳಿಗೆ ದೋಣಿಯಲ್ಲೇ ಹೋಗಬೇಕಾಗಿತ್ತು. ಒಂದು ದಿನ ಬೆಳಿಗಿನಿಂದ ಬಲವಾದ ಮಳೆ. ಪೋಸ್ಟ್‌ಮಾಸ್ಟರನ ಶಿಷ್ಯಳು ಬಲು ಹೊತ್ತು ಬಾಗಿಲ ಹತ್ತಿರ ಕಾಯ್ದು ಕುಳಿತಿದ್ದಳು. ಆದರೆ ಇತರ ದಿನಗಳ ಹಾಗೆ ಪೋಸ್ಟ್‌ಮಾಸ್ಟರನ ಕೂಗು ಕೇಳಿಸಲಿಲ್ಲ. ಕೊನೆಗೆ ಅವಳೇ ಸ್ಲೇಟು ಪುಸ್ತಕಗಳನ್ನು ತೆಗೆದುಕೊಂಡು ಒಳಕ್ಕೆ ಹೋದಳು. ಪೋಸ್ಟ್‌ಮಾಸ್ಟರನು ಮಂಚದ ಮೇಲೆ ಕಣ್ಣು ಮುಚ್ಚಿಕೊಂಡು ಮಲಗಿದ್ದನು. ಅವನು ನಿದ್ರೆಮಾಡುವನೆಂದೆಣಿಸಿ ಮೆಲ್ಲಗೆ ನಿಶ್ಶಬ್ದವಾಗಿ ರತ್ನ ಹೊರಡಲೆತ್ನಿಸಿದಳು. ಇದ್ದಕ್ಕಿದ್ದಂತೆ ''ರತನ್'' ಎಂಬ ಶಬ್ದ ಕೇಳಿಸಿತು. ತಕ್ಷಣ ಹಿಂದಕ್ಕೆ ಬಂದು ''ಅಣ್ಣನವರೇ ಮಲಗಿದ್ದಿರೇನು ?'' ಎಂದಳು.

ಪೋಸ್ಟ್‌ಮಾಸ್ಟರನು ಕಾತರಸ್ವರದಿಂದ "ಮೈಯಲ್ಲಿ ಹುಷಾರಿಲ್ಲ. ನನ್ನ ಹಣೆಯ ಮೇಲೆ ಕೈಯಿಟ್ಟು ನೋಡು" ಎಂದನು. ಪಾಪ, ಜೊತೆಗಾರರಿಲ್ಲದ ಪರದೇಶದ ಈ ಒಂಟಿ ಜೀವಿಗೆ ಖಾಯಿಲೆಯ ವೇಳೆಯಲ್ಲಿ ಸ್ವಲ್ಪ ಶುಶ್ರೂಷೆಯ ಆಶೆಯಾಗುತ್ತಿತ್ತು. ಬಿಸಿಯಾಗಿ ಉರಿಯುವ ಹಣೆಯ ಮೇಲೆ ಬಳೆಯ ಕೈಯ ಸ್ಪರ್ಶವನ್ನು ಆಶಿಸುತ್ತಿದ್ದನು. ಈ ಪರದೇಶದಲ್ಲಿ ಸ್ನೇಹಮಯಿ ನಾರೀರೂಪದಲ್ಲಿ ತಾಯಿ ಮತ್ತು ಸೋದರಿಯರು, ಹತ್ತಿರ ಕುಳಿತಿರಬೇಕೆಂದು ಅವನ ಮನಸ್ಸಿನಲ್ಲಿ ಆಶೆಯಾಗುತ್ತಿತ್ತು. ಅಭಿಲಾಷೆಯಾದರೂ ವ್ಯರ್ಥವಾಗಲಿಲ್ಲ. ಬಾಲಿಕೆ 'ರತನ'ಳು ಆಗ ಇನ್ನು ಬಾಲಿಕೆಯಾಗಿರಲಿಲ್ಲ. ಅದೇ ಘಳಿಗೆಯಲ್ಲಿ ಅವಳು ತಾಯಿಯ ಸ್ಥಾನವನ್ನು ವಹಿಸಿದಳು. ವೈದ್ಯನನ್ನು ಕರೆತಂದಳು. ಹೊತ್ತು ಹೊತ್ತಿಗೆ ಔಷಧಿಕೊಟ್ಟಳು. ರಾತ್ರಿಯೆಲ್ಲಾ ಎಚ್ಚರವಾಗಿ ತಲೆಯ ಹತ್ತಿರ ಕುಳಿತಿರುತ್ತಿದ್ದಳು. ತಾನೇ ಪಥ್ಯದ ಅಡಿಗೆಯನ್ನು ಮಾಡಿ ಬಡಿಸಿದಳು. ಬಾರಿ ಬಾರಿಗೆ 'ಅಣ್ಣನವರೇ ಈಗ ಸ್ವಲ್ಪ ಉತ್ತಮವಾಗಿದೆಯಲ್ಲವೆ' ಎಂದು ಕೇಳುತ್ತಿದ್ದಳು.

ಪೋಸ್ಟ್‌ಮಾಸ್ಟರನು ಖಾಯಿಲೆಯಿಂದ ಹುಷಾರಾದನು. "ಶರೀರವು ಅತಿ ಬಡವಾಗಿತ್ತು 'ಇಲ್ಲಿಂದ ಹೇಗಾದರೂ ವರ್ಗಮಾಡಿಕೊಂಡು ಹೊರಟು ಹೋಗಬೇಕು. ಇನ್ನು ಇಲ್ಲಿ ನಿಲ್ಲಕೂಡದು' ಎಂದು ನಿಶ್ಚಯಮಾಡಿಕೊಂ

ಡನು. ಸ್ಥಳದ ಅನಾರೋಗ್ಯ ಪರಿಸ್ಥಿತಿಯನ್ನೂ ತನ್ನ ದೇಹಸ್ಥಿತಿಯನ್ನೂ ವಿವರಿಸಿ ತನ್ನನ್ನು ಎಲ್ಲಿಗಾದರೂ ವರ್ಗಮಾಡಬೇಕೆಂದು ಕಲ್ಕತ್ತೆಯಲ್ಲಿದ್ದ ಮೇಲಣ ಅಧಿಕಾರಿಗಳಿಗೆ ಅರ್ಜಿ ಬರೆದುಕೊಂಡನು. ರೋಗಿಯ ಸೇವೆಯಿಂದ ಬಿಡುಗಡೆಹೊಂದಿ 'ರತನ್'ಳು ಮತ್ತೆ ಬಾಗಿಲ ಜಗುಲಿಯಲ್ಲಿ ತನ್ನ ಸ್ಥಳವನ್ನು ಹಿಡಿದಳು. ಆದರೆ ಮುಂಚಿನ ಹಾಗೆ ಅವಳಿಗೆ ಈಗ 'ಕರೆ' ಬರುತ್ತಿರಲಿಲ್ಲ. ಆಗಾಗ್ಯೆ ಇಣಿಕಿ ನೋಡಿದಾಗ ಪೋಸ್ಟ್‌ಮಾಸ್ಟರು ಅತ್ಯಂತ ಅನ್ಯಮನಸ್ಕನಾಗಿ ಕುರ್ಚಿಯಲ್ಲಿ ಕುಳಿತೋ, ಮಂಚದಮೇಲೆ ಮಲಗಿಯೋ ಇರುತ್ತಿದ್ದುದು ಅವಳಿಗೆ ಕಾಣುತ್ತಿತ್ತು. ರತನ್‌ಳು 'ಕರೆ'ಯನ್ನು ಇದಿರು ನೋಡುತ್ತಾ ಕಾಯ್ದುಕೊಂಡಿದ್ದರೆ, ಅತ್ತ ಅವನು ತನ್ನ ಅರ್ಜಿಯ ಪ್ರತ್ಯುತ್ತರವನ್ನು ನಿರೀಕ್ಷಿಸುತ್ತಾ ಮೈಮರೆತು ಕುಳಿತಿರುತ್ತಿದ್ದನು. ಹುಡುಗಿಯು ಬಾಗಿಲಲ್ಲಿ ಕುಳಿತು ತನ್ನ ಹಳೆಯ ಪಾಠಗಳನ್ನೆಲ್ಲಾ ಸಾವಿರಸಾರಿ ತಿರುವಿ ಹಾಕಿದಳು. ಮತ್ತೇನಾದರೂ ಕರೆದರೆ ಆಗೆಲ್ಲಿ ತನ್ನ ಪಾಠ ಮರೆತುಹೋಗುವುದೋ ಎಂಬ ಹೆದರಿಕೆ ಅವಳಿಗೆ—ಕೊನೆಗೆ ಒಂದೆರಡು ವಾರಗಳ ನಂತರ ಒಂದು ದಿನ ಸಂಜೆಯಲ್ಲಿ ಪೋಸ್ಟ್‌ಮಾಸ್ಟರನು ಅವಳನ್ನು ಕರೆದನು.

ಜಗುಲಿಯಿಂದ ಅವಳು ಮನೆಯೊಳಕ್ಕೆ ಪ್ರವೇಶಿಸಿ—"ಅಣ್ಣನವರೇ ನನ್ನನ್ನು ಕರೆದಿರೇನು ?" ಎಂದಳು 'ರತನ್ ನಾಳೆಯೇ ನಾನು ಹೋಗುವೆನು' ಎಂದು ಪೋಸ್ಟ್ ಮಾಸ್ಟರನು ಹೇಳಿದನು.

ರತನ್ : "ಎಲ್ಲಿಗೆ ಹೋಗುವಿರಿ, ಅಣ್ಣಾ ? "

ಪೋಸ್ಟ್‌ಮಾಸ್ಟರ್ : "ಮನೆಗೆ"

ರತನ್ : "ಮತ್ತೆ ಯಾವಾಗ ಬರುವಿರಿ."

ಪೋಸ್ಟ್ ಮಾಸ್ಟರ್ : "ಮತ್ತೆ ಬರುವ ಯೋಚನೆಯಿಲ್ಲ."

ರತ್ನಳು ಮತ್ತಾವ ಮಾತನ್ನೂ ಆಡಲಿಲ್ಲ. ಪೋಸ್ಟ್‌ಮಾಸ್ಟರನು ತಾನಾಗಿಯೇ ಅವಳಿಗೆ ಎಲ್ಲ ಹೇಳಿದನು. ಅವನು ವರ್ಗಕ್ಕಾಗಿ ಅರ್ಜಿಹಾಕಿ ಕೊಂಡಿದ್ದುದು. ಅರ್ಜಿಯು ಮಂಜೂರಾಗದುದು. ಅದರಿಂದಲೇ ತಾನು ಕೆಲಸಕ್ಕೆ ರಾಜೀನಾಮೆಕೊಟ್ಟು ಮನೆಗೆ ಹೋಗುತ್ತಿರುವುದು ಎಂದೆಲ್ಲ ತಿಳಿಸಿ ದನು. ಬಹುಕಾಲ ಇಬ್ಬರೂ ಏನೂ ಮಾತನಾಡಲಿಲ್ಲ. ಮಿಣುಕು ದೀಪ

ಉರಿಯುತ್ತಿತ್ತು ಒಂದು ಕಡೆ ಸೂರಿನಿಂದ ಟಪ್ ಟಪ್ ಎಂದು ನೀರು ಸೋರುತ್ತಿತ್ತು.

ಸ್ವಲ್ಪ ಹೊತ್ತಾದನಂತರ ರತ್ನಳು ಮೆಲ್ಲಗೆ ಎದ್ದು ರೊಟ್ಟಿ ಮಾಡಲು ಅಡಿಗೆ ಮನೆಗೆ ಹೋದಳು. ಇತರ ದಿನಗಳಂತೆ ಅವಳ ಕೆಲಸದಲ್ಲಿ ಅಂದು ಚುರುಕಿರಲಿಲ್ಲ. ಮಧ್ಯೆ ಮಧ್ಯೆ ಅವಳ ತಲೆಯಲ್ಲಿ ಹಲವು ಭಾವನೆಗಳು ಹೊಳೆಯುತ್ತಿದ್ದಿರಬೇಕು. ಪೋಸ್ಟ್‌ಮಾಸ್ಟರನು ಊಟಮಾಡಿದನಂತರ ಹುಡುಗಿಯು ಅವನನ್ನು ನೋಡಿ—"ಅಣ್ಣ ನನ್ನನ್ನು ನಿಮ್ಮ ಮನೆಗೆ ಕರೆದು ಕೊಂಡು ಹೋಗಿರಿ'' ಎಂದಳು.

ಪೋಸ್ಟ್ ಮಾಸ್ಟರು ನಗುತ್ತಾ "ಅದು ಹೇಗೆ ಸಾಧ್ಯ" ಎಂದನು. ಯಾವ ಕಾರಣದಿಂದ ವಿಷಯವು ಅಸಾಧ್ಯವೆಂಬುದನ್ನು ಆತನು ಹೇಳಲಿಲ್ಲ. ಅದನ್ನು ಆ ಹುಡುಗಿಗೆ ತಿಳಿಸುವುದು ಆವಶ್ಯಕವೆಂದು ಅವನು ಎಣಿಸಲಿಲ್ಲ.

ರಾತ್ರಿಯೆಲ್ಲಾ ಸ್ವಪ್ನ ಮತ್ತು ಎಚ್ಚರದಲ್ಲಿ ಹುಡುಗಿಯ ಕಿವಿಯಲ್ಲಿ ಪೋಸ್ಟ್‌ಮಾಸ್ಟರನ 'ಅದು ಹೇಗೆ ಸಾಧ್ಯ?' ಎಂಬ ಹಾಸ್ಯಧ್ವನಿಯಿಂದ ಕೂಡಿದ ಶಬ್ದವು ಕೇಳಿಸುತ್ತಿತ್ತು.

ಬೆಳಿಗ್ಗೆ ಎದ್ದು ಪೋಸ್ಟ್‌ಮಾಸ್ಟರನು ಸ್ನಾನದ ಮನೆಗೆ ಹೋದನು. ಅವನ ಸ್ನಾನದ ನೀರು ಸಿದ್ಧವಾಗಿತ್ತು. ಕಲ್ಕತ್ತೆಯ ಅಭ್ಯಾಸದಿಂದ ಅವನು ಮನೆಯಲ್ಲಿ ತಂದು ತುಂಬಿಟ್ಟ ನೀರಿನಲ್ಲೇ ಸ್ನಾನಮಾಡುತ್ತಿದ್ದನು. ಅವನು ಎಷ್ಟು ಹೊತ್ತಿಗೆ ಹೊರಡುವನೆಂಬ ಸಂಗತಿಯನ್ನು ಹುಡುಗಿ ಕೇಳಿರಲಿಲ್ಲ. ಬೆಳಿಗ್ಗೆ ಬೇಕಾದೀತೆಂದು ಎಣಿಸಿ ರತ್ನಳು ರಾತ್ರಿಯಲ್ಲೇ ನದಿಯಿಂದ ನೀರು ಹೊತ್ತು ತಂದಿಟ್ಟಿದ್ದಳು. ಸ್ನಾನವಾದನಂತರ ರತನಳನ್ನು ಕೂಗಿದನು. ರತ್ನಳು ನಿಶ್ಶಬ್ದವಾಗಿ ಕೊಠಡಿಗೆ ಬಂದು ಒಡೆಯನು ಏನು ಹೇಳುವನೋ ಎಂದು ಅವನ ಮುಖ ನೋಡುತ್ತಿದ್ದಳು. ಅವನು ಹೀಗೆಂದನು, "ರತ್ನ ನನ್ನ ಸ್ಥಳಕ್ಕೆ ಇನ್ನೊಬ್ಬರು ಬರುವರಲ್ಲಾ ಅವರಿಗೆ ಹೇಳಿ ಹೋಗು ವೆನು. ಅವರೂ ನನ್ನಂತೆಯೇ ನಿನ್ನನ್ನು ನೋಡಿಕೊಳ್ಳುವರು. ನಾನು ಹೋಗುವೆನೆಂದು ನೀನು ಯೋಚಿಸಬೇಕಾದ್ದಿಲ್ಲ'' ಎಂದನು. ಈ ಮಾತು ಗಳು ಅವನ ಅತಿ ಸ್ನೇಹಪೂರ್ಣ ದಯಾರ್ದ್ರ ಹೃದಯದಿಂದ ಹೊರಟಿದ್ದವು. ಅದರೆ ನಾರೀಹೃದಯವನ್ನರಿತವರಾರು? ರತ್ನಳು ಬಹು ಬಾರಿ ಒಡೆಯನ

ತಿರಸ್ಕಾರದ ಶಬ್ದಗಳನ್ನು ನೀರವವಾಗಿ ಸಹಿಸಿದ್ದಳು. ಆದರೆ ಇಂದು ಈ ಮೃದು ಶಬ್ದವನ್ನು ಸಹಿಸಲಾರದಾದಳು. ಒಮ್ಮೆಗೆ ಉಬ್ಬಿದ ಎದೆಯೊಡನೆ ಅಳುತ್ತಾ "ಇಲ್ಲ ಇಲ್ಲ ನೀವು ಯಾರಿಗೂ ಹೇಳಬೇಕಾಗಿಲ್ಲ. ನನಗೆ ಇಲ್ಲಿರಲು ಇಷ್ಟ ವಿಲ್ಲ" ಎಂದಳು.

ರತ್ನಳ ಇಂತಹ ವ್ಯವಹಾರವನ್ನು ಪೋಸ್ಟ್‌ಮಾಸ್ಟರನು ಎಂದೂ ಕಂಡಿರಲಿಲ್ಲ. ಅದರಿಂದಲೇ ಅವಾಕ್ಕಾದನು.

ಹೊಸ ಪೋಸ್ಟ್‌ಮಾಸ್ಟರನು ಬಂದನು. ಅವನಿಗೆ ಎಲ್ಲ ಛಾರ್ಜನ್ನು ವಹಿಸಿ ಹಳೆಯ ಮಾಸ್ಟರು ಹೊರಡಲು ಉದ್ಯುಕ್ತನಾದನು. ಹೋಗುವ ಸಮಯದಲ್ಲಿ ರತ್ನಳನ್ನು ಕೂಗಿ ಹೇಳಿದನು "ರತ್ನ! ನಿನಗೆ ನಾನೇನೂ ಕೊಟ್ಟಿಲ್ಲ. ಇಂದು ಹೋಗುವಾಗ ಏನನ್ನಾದರೂ ಕೊಟ್ಟು ಹೋಗಬೇಕೆಂದು ತೋರುವುದು. ಇದರಿಂದ ನಿನಗೆ ಸ್ವಲ್ಪದಿನ ಉಪಯೋಗವಾದೀತು."

ದಾರಿಯ ಖರ್ಚಿಗೆ ಬೇಕಾದಷ್ಟು ಹಣವನ್ನಿಟ್ಟುಕೊಂಡು ತನ್ನ ಸಂಬಳ ದಲ್ಲಿ ಉಳಿದಿದ್ದ ಹಣವನ್ನು ಜೇಬಿನಿಂದ ತೆಗೆದನು. ಆಗ ರತ್ನಳು ಕೆಳಗೆ ಬಿದ್ದು ಅವನ ಕಾಲು ಹಿಡಿದುಕೊಂಡು "ಅಣ್ಣಾ, ನಿಮ್ಮ ಕಾಲಿಗೆ ಬಿದ್ದು ಬೇಡಿ ಕೊಳ್ಳುತ್ತೇನೆ. ನೀವು ನನಗೆ ಏನನ್ನೂ ಕೊಡಬೇಡಿ. ನನಗಾಗಿಯೂ ಏನೂ ಯೋಚಿಸಬೇಕಾಗಿಲ್ಲ" ಎಂದಳು. ಹೀಗೆಂದು ಅವಳು ಅಲ್ಲಿಂದ ಒಂದೇ ಉಸುರಿಗೆ ಎಲ್ಲಿಯೋ ಓಡಿಬಿಟ್ಟಳು.

ಹಳೆಯ ಪೋಸ್ಟ್‌ಮಾಸ್ಟರು ನಿಟ್ಟುಸಿರು ಬಿಟ್ಟು ಕೈಯಲ್ಲಿ ರೈಲುಚೀಲ ವನ್ನೆತ್ತಿಕೊಂಡು, ಛತ್ರಿಯನ್ನು ಹೆಗಲಮೇಲಿಟ್ಟುಕೊಂಡು, ಕೂಲಿಯವನ ತಲೆಯಮೇಲೆ ನೀಲಿ ಮತ್ತು ಬಿಳಿಯ ಗೆರೆಗಳನ್ನೆಳೆದ ಟಿನ್ನಿನ ಪೆಟ್ಟಿಗೆಯನ್ನು ಹೊರಿಸಿಕೊಂಡು ಮೆಲ್ಲ ಮೆಲ್ಲಗೆ ದೋಣಿಯ ಕಡೆಗೆ ನಡೆದನು.

ದೋಣಿ ಹತ್ತಿದನು. ಅದು ಹೊರಟಿತು. ಮಳೆಯ ನೀರಿನಿಂದ ತುಂಬಿದ ನದಿಯ ನೀರು ಧರಣಿಯ ಕಣ್ಣೀರಿನಂತೆ ನಾಲ್ಕೂ ಕಡೆ ಕುಲುಕುಲು ಶಬ್ದ ಮಾಡುತ್ತಿತ್ತು. ಒಬ್ಬ ಸಾಮಾನ್ಯ ಹಳ್ಳಿ ಹುಡುಗಿಯ ಕರುಣ ಮುಖದ ಚಿತ್ರವು ಆ ಮಹಾ ವಿಶ್ವದ ಮಾರ್ಮಿಕ ವ್ಯಥೆಯಾಗಿ ಪ್ರಕಾಶವಾಗುವಂತೆ ಅವನಿಗೆ ತೋರುತ್ತಿತ್ತು. ಪುನಃ ಹಿಂತಿರುಗಿ ಹೋಗಿ ಜಗತ್ತಿನ ಪ್ರೇಮದಿಂದ ವಂಚಿತಳಾದ ಆ ಅನಾಥಳನ್ನು ಸಂಗಡ ಕರೆದುಕೊಂಡು ಹೋಗೋಣವೇ

ಎಂದು ಅವನಿಗೊಮ್ಮೆ ಅನಿಸಿತು. ಅಷ್ಟರಲ್ಲಿ ಪಟಕ್ಕೆ ಗಾಳಿ ತುಂಬಿ ದೋಣಿಯು ಮುಂದೆ ಓಡುತ್ತಿತ್ತು. ಗ್ರಾಮವನ್ನು ಅತಿಕ್ರಮಿಸಿದನಂತರ ನದೀ ತೀರದ ಸ್ಮಶಾನವು ಕಣ್ಣಿಗೆ ಕಾಣಿಸಿತು. ನದೀ ಪ್ರವಾಹದಲ್ಲಿ ಮುಂದೆ ನಡೆಯುತ್ತಿದ್ದ ಪಥಿಕನ ಉದಾರ ಹೃದಯದಲ್ಲಿ ಈ ತತ್ವವು ಉದಯಿಸಿತು. 'ಜೀವಮಾನದಲ್ಲಿ ಇಂತಹ ವಿಚ್ಛೇದವೆಷ್ಟು, ಮರಣವೆಷ್ಟು, ಹಿಂತಿರುಗಿ ಫಲ ವೇನು ? ಪೃಥ್ವಿಯಲ್ಲಿ ಯಾರು ಯಾರಿಗೆ ಸ್ಥಿರ.'

ಆದರೆ ರತ್ನಳ ಮನಸ್ಸಿನಲ್ಲಿ ಯಾವ ತತ್ವವೂ ಉಪಯಿಸಲಿಲ್ಲ. ಅವಳು ಆ ಪೋಸ್ಟ್ ಆಫೀಸಿನ ಮನೆಯ ನಾಲ್ಕೂ ಕಡೆಯೂ ಕಣ್ಣೀರು ಸುರಿಸುತ್ತ ಸುತ್ತಿ ಸುತ್ತಿ ತಿರುಗುತ್ತಿದ್ದಳು. ಅವಳ ಮನಸ್ಸಿನಲ್ಲಿ ಕ್ಷೀಣವಾದ ಒಂದು ಆಶೆ ಮೂಡುತ್ತಿತ್ತು. ಅಣ್ಣನವರು ಮತ್ತೆ ಹಿಂತಿರುಗಿ ಬರಬಹುದೆಂದು ಅವಳು ಎಣಿಸುತ್ತಿದ್ದಳೋ ಏನೋ. ಆ ಆಶೆಯ ಬಂಧನದಲ್ಲಿ ಸಿಕ್ಕಿದ ರತ್ನಳಿಗೆ ದೂರವಾಗಿ ಹೋಗಲು ಮನಸ್ಸೇ ಆಗದು.

ಅಯ್ಯೋ ! ಬುದ್ಧಿಹೀನ ಮಾನವ ಹೃದಯವೇ ಹಾಗೆ. ಅದರ ಭ್ರಾಂತಿಯು ಎಂದಿಗೂ ಸವೆಯದು ಯುಕ್ತಿಯ ವಿಧಾನವು ಬಹು ವಿಲಂಬ ವಾಗಿ ತಲೆಗೆ ಹತ್ತಿಕೊಳ್ಳುವುದು. ಪ್ರಬಲ ಪ್ರಮಾಣವನ್ನೂ ನಂಬಿಕೊ ಳ್ಳುವ ಆಶೆಯನ್ನು ಎರಡು ಬಾಹುಗಳ ಪಾಶದಲ್ಲಿ ಪ್ರಾಣಾಂತದವರೆಗೂ ಎದೆಗೆ ಅಪ್ಪಿಕೊಳ್ಳುವುದು. ಕೊನೆಗೊಂದು ದಿನ ಎಲ್ಲ ನರಗಳನ್ನೂ ಕತ್ತರಿಸಿ ಹೃದ ಯದ ರಕ್ತವನ್ನು ಒಣಗಿಸಿ ಅದು ಹಾರಿಹೋಗುವುದು. ಆಗ ಅವನಿಗೆ ತಿಳಿವು ಬರುವುದು. ಆದರೂ ಪುನಃ ಭ್ರಾಂತಿಪಾಶದಲ್ಲಿ ಸಿಕ್ಕಿಕೊಳ್ಳಲು ಚಿತ್ತವು ವ್ಯಾಕುಲಗೊಳ್ಳುವುದು.

---

# ಅಸ್ಥಿಪಂಜರ

ನಾವು ಮೂವರು ಸಂಗಡಿಗ ಬಾಲಕರು ಮಲಗುತ್ತಿದ್ದೆವಲ್ಲ, ಆ ಕೊಠಡಿಯ ಪಕ್ಕದ ಕೋಣೆಯ ಗೋಡೆಗೆ ಒಂದು 'ದೊಡ್ಡ ಅಸ್ಥಿಪಂಜರ ನೇತು ಹಾಕಿತ್ತು. ರಾತ್ರಿಯಲ್ಲಿ ಅದರ ಮೂಳೆಗಳು ಗಾಳಿಗೆ ಅಲುಗಿ ಖಟಖಟ ಎಂದು ಶಬ್ದಮಾಡುತ್ತಿದ್ದುವು. ಹಗಲಿನಲ್ಲಿ ಆ ಮೂಳೆಗಳನ್ನು ಅಲುಗಿಸುವ ಕೆಲಸ ನಮ್ಮಗಳದಾಗಿತ್ತು. ನಮ್ಮಗಳನ್ನು ಸರ್ವಪ್ರಯತ್ನದಿಂದ ಸರ್ವ ವಿದ್ಯಾಪಾರಂಗತರನ್ನಾಗಿ ಮಾಡಬೇಕೆಂಬ ಆಶೆ ನಮ್ಮ ಪೋಷಕರುಗಳಿಗಿತ್ತು. ಅವರುಗಳ ಅಭಿಪ್ರಾಯ ಎಷ್ಟು ದೂರ ಸಫಲವಾಯಿತೆಂಬ ವಿಷಯವನ್ನು ನಮ್ಮಗಳ ಸಂಗತಿ ಪೂರ್ಣವಾಗಿ ಬಲ್ಲವರಿಗೆ ತಿಳಿಸಬೇಕಾದ ಆವಶ್ಯಕತೆಯಿಲ್ಲ. ನಮ್ಮಗಳನ್ನೇ ಅರಿಯದವರಿಗೆ ತಿಳಿಸದಿರುವುದೇ ಶ್ರೇಯಸ್ಕರ.

ಆಗಿನಿಂದ ಬಹುಕಾಲ ಕಳೆದಿದೆ. ಈ ನಡುವೆ ಆ ಕೋಣೆಯಿಂದ ಆ ಅಸ್ಥಿಪಂಜರವೂ, ನನ್ನ ಮಸ್ತಿಷ್ಕದಿಂದ ಅಸ್ಥಿವಿದ್ಯೆಯೂ ಎಲ್ಲಿಗೆ ಸ್ಥಾನಾಂತರಿತವಾಗಿವೆಯೆಂಬುದನ್ನು ಪತ್ತೆಮಾಡುವುದು ಸಾಧ್ಯವಿಲ್ಲ.

ಕೆಲವು ದಿನಗಳ ಹಿಂದೆ ಒಂದು ರಾತ್ರಿ ಯಾವ ಕಾರಣದಿಂದಲೋ ಬೇರೆಲ್ಲೂ ಸ್ಥಳವಿಲ್ಲದ ಕಾರಣ ನನಗೆ ಆ ಕೊಠಡಿಯಲ್ಲೇ ಮಲಗಿಕೊಳ್ಳುವ ಪ್ರಸಂಗ ಒದಗಿತು. ಸ್ಥಳ ಬದಲಾಯಿಸುವ ಅಭ್ಯಾಸವಿಲ್ಲದ ಕಾರಣದಿಂದ ನಿದ್ರೆ ಬರಲಿಲ್ಲ. ಈ ಮಗ್ಗುಲಿಂದ ಆ ಮಗ್ಗುಲಿಗೆ ಹೊರಳುತ್ತ ಹೊರಳುತ್ತ ಇರುವಾಗ ಚರ್ಚಿನ ಗಡಿಯಾರದಲ್ಲಿ ದೊಡ್ಡ ಅಂಕೆಯ ಗಂಟೆಗಳೆಲ್ಲ ಹೊಡೆದು ಮುಗಿದುವು. ಈ ನಡುವೆ ಕೋಣೆಯ ಮೂಲೆಯೊಂದರಲ್ಲಿ ಉರಿಯುತ್ತಿದ್ದ ಎಣ್ಣೆದೀಪವೊಂದು ಸುಮಾರು ನಾಲ್ಕಾರು ನಿಮಿಷಗಳಿಂದ ಮಿಣುಗುಟ್ಟುತ್ತಿದ್ದು ಥಟ್ಟನೆ ಆರಿಹೋಯಿತು. ಕೆಲವೇ ದಿನಗಳ ಹಿಂದೆ ನಮ್ಮ ಮನೆಯಲ್ಲಿ ಒಂದೆರಡು ದುರ್ಘಟನೆಗಳು ಸಂಭವಿಸಿದ್ದುವು. ಆದ್ದರಿಂದಲೇ ಈ ದೀಪ ಆರಿದ ನಂತರ ಸಾವಿನ ವಿಷಯ ನೆನಪಾಗುವುದು ಸಹಜವಾಗಿತ್ತು. ರಾತ್ರಿಯ ಈ ಎರಡನೆಯ ಝಾವದಲ್ಲಿ ಈ ದೀಪದ ಜ್ವಾಲೆ ಹೇಗೆ ಚಿರ ಅಂಧಕಾರ

ದಲ್ಲಿ ಮಿಲಿತವಾಯಿತೋ ಹಾಗೆಯೇ ಮಾನವರ ಸಣ್ಣ ಸಣ್ಣ ಪ್ರಾಣಶಿಖೆಗಳು ಒಮ್ಮೊಮ್ಮೆ ಹಗಲಲ್ಲಿ, ಒಮ್ಮೊಮ್ಮೆ ರಾತ್ರಿಯಲ್ಲಿ ಹಠತ್ತಾಗಿ ಮರೆಯಾಗಿ ಹೋಗುವವು ಎಂದು ಮನದಲ್ಲಿ ಅನಿಸಿತು.

ಕ್ರಮೇಣ ಆ ಅಸ್ಥಿಪಂಜರದ ಕಥೆ ನೆನಪಾಯಿತು. ಅದಕ್ಕೆ ಜೀವವಿದ್ದ ಕಾಲವನ್ನೂ ಆಗಿನ ಸಂದರ್ಭವನ್ನೂ ಕಲ್ಪಿಸಿಕೊಳ್ಳುವ ಯೋಚನೆ ಯಲ್ಲಿ ಮುಳುಗಿದ್ದಾಗ, ಕತ್ತಲೆಯಲ್ಲಿ ಯಾರೋ ನನ್ನ ಹಾಸಿಗೆಯ ಸುತ್ತ ಇದ್ದ ಸೊಳ್ಳೆಯ ಪರದೆಯನ್ನು ತಡವರಿಸುತ್ತಾ ಸುತ್ತುತ್ತಿರುವಂತೆ ತೋರಿತು. ಆ ವ್ಯಕ್ತಿಯು ಉಸಿರಾಡುವ ಸದ್ದೂ ಘನವಾಗಿ ಕೇಳಿಸುವಂತಿತ್ತು. ಅದು ಏನನ್ನೋ ಹುಡುಕುತ್ತ ಸಿಕ್ಕದಿರಲು ಕೊಠಡಿಯೆಲ್ಲವನ್ನೂ ಪ್ರದಕ್ಷಿಣೆಮಾಡು ತ್ತಿರುವಂತೆ ತೋರಿತು. ಇವೆಲ್ಲ ನನ್ನ ನಿದ್ರೆಯಿಲ್ಲದ ಕಾದ ಮೆದುಳಿನ ಕಲ್ಪನೆಯೆಂದು ಅನಿಸಿತು. ನನ್ನ ತಲೆಯ ನರಗಳಲ್ಲಿ ವೇಗವಾಗಿ ಹರಿಯುವ ರಕ್ತದ ಶಬ್ದವೇ ಹೀಗೆ ಕಾಲು ಸಪ್ಪಳದಂತೆ ಭಾಸವಾಗುವುದೆಂದೂ ತೋರಿತು. ಆದರೂ ಮೈ ಜುಮ್ಮೆನ್ನುತ್ತಿತ್ತು. ಈ ಅಕಾರಣ ಅಂಜಿಕೆಯನ್ನು ದೂರಮಾಡುವುದಕ್ಕಾಗಿ 'ಯಾರದು ?' ಎಂದು ಕೂಗು ಹಾಕಿದೆ. ಕಾಲಿನ ಸಪ್ಪಳವು ನನ್ನ ಸೊಳ್ಳೇ ಪರದೆಯ ಹತ್ತಿರ ಬಂದು ನಿಂತಿತು. 'ನಾನು, ನನ್ನ ಆ ಅಸ್ಥಿಪಂಜರವು ಎಲ್ಲಿ ಹೋಗಿದೆಯೋ ಅದನ್ನು ಹುಡುಕುತ್ತಿರು ವೆನು' ಎಂದು ಪ್ರತ್ಯುತ್ತರ ಹೇಳಿದಂತೆ ತೋರಿತು.

ಸ್ವಂತ ಕಲ್ಪನೆಯ ಸೃಷ್ಟಿಯ ಬಳಿ ಭಯ ತೋರಿಸುವುದು ಏತಕ್ಕೂ ಬಾರದ ಕೆಲಸ ಎಂದು ನಾನು ಭಾವಿಸಿಕೊಂಡು, ಪಕ್ಕದ ದಿಂಬನ್ನು ಬಲವಾಗಿ ಅಪ್ಪಿಕೊಂಡು ಚಿರಪರಿಚಿತನಂತೆ ಅತಿ ಸಹಜ ಸ್ವರದಲ್ಲಿ 'ಈ ಮಧ್ಯ ರಾತ್ರಿಯಲ್ಲಿ ಒಳ್ಳೆಯ ಕೆಲಸ ಹಿಡಿದು ಹೊರಟಿರುವೆ. ಅದಿರಲಿ, ಈಗ ಆ ಅಸ್ಥಿಪಂಜರದಿಂದ ನಿನಗೇನು ಪ್ರಯೋಜನ ?' ಎಂದೆನು.

ಅಂಧಕಾರದಲ್ಲಿ ಸೊಳ್ಳೇ ಪರದೆಯ ಅತ್ಯಂತ ಸಮೀಪದಿಂದ ಉತ್ತರ ಬಂದಿತು. "ಏನಂದೆ ! ನನ್ನ ಎದೆಯ ಮೂಳೆ ಅದರ ಮಧ್ಯದಲ್ಲಿ ಇಲ್ಲವೇ ? ನನ್ನ ಇಪ್ಪತ್ತಾರು ವರ್ಷ ವಯಸ್ಸಿನ ಯೌವನವು ಅದರ ನಾಲ್ಕು ಪಾರ್ಶ್ವ ದಲ್ಲೂ ಹರಡಿರಲಿಲ್ಲವೇ ? ಒಂದು ಸಲ ಅದನ್ನು ನೋಡಲು ಆಶಿಸಬಾರದೇ ?"

ತಕ್ಷಣ ನಾನು 'ಆ ಮಾತು ನ್ಯಾಯವಾದದ್ದೇ ಸರಿ. ನೀನು ಅದನ್ನು ಹುಡುಕುತ್ತ ಹೋಗು. ನಾನು ಸ್ವಲ್ಪ ನಿದ್ರಿಸಲು ಯತ್ನಿಸುವೆನು' ಅಂದೆನು.

ಅದು 'ನೀನು ಒಂಟಿಯಾಗಿಯೇ ಇರುವ ಹಾಗಿದೆ. ಸ್ವಲ್ಪ ಇಲ್ಲಿಯೇ ಕುಳಿತುಕೊಳ್ಳುತ್ತೇನೆ. ಸ್ವಲ್ಪ ಮಾತನಾಡಬಹುದು. ಮುವ್ವತ್ತೈದು ವರ್ಷಗಳಿಗೆ ಮುಂಚೆ ನಾನೂ ಮನುಷ್ಯರ ಹತ್ತಿರ ಕುಳಿತು ಮಾತನಾಡುತ್ತಿದ್ದೆ. ಈ ಮುವ್ವತ್ತೈದು ವರ್ಷಗಳು ನಾನು ಕೇವಲ ಸ್ಮಶಾನದ ಗಾಳಿಯಲ್ಲಿ ಹು-ಹೂ ಎನ್ನುತ್ತ ಸುತ್ತುತ್ತಿರುವೆನು. ಇಂದು ನಿನ್ನ ಹತ್ತಿರ ಕುಳಿತು ಮತ್ತೊಮ್ಮೆ ಮನುಷ್ಯರಂತೆ ಮಾತನಾಡುವೆನು' ಎಂದಿತು.

ಪರದೆಯ ಹತ್ತಿರ ಯಾರೋ ಕುಳಿತ ಹಾಗಾಯಿತು. ಬೇರೆ ದಾರಿಯಿಲ್ಲದೆ ನಾನು ಸ್ವಲ್ಪ ಉತ್ಸಾಹವನ್ನೇ ತೋರುತ್ತಾ 'ಅದೂ ಸರಿಯೇ ಮನಸ್ಸಿಗೆ ಹರ್ಷವಾಗುವಂತಹ ಕಥೆಯೊಂದನ್ನು ಹೇಳು' ಎಂದೆನು.

''ಎಲ್ಲಕ್ಕಿಂತಲೂ ಅತಿ ಸ್ವಾರಸ್ಯವಾದ ಕಥೆ ಕೇಳಬಯಸುವೆಯಾದರೆ ನನ್ನ ಕಥೆಯನ್ನೇ ಹೇಳುತ್ತೇನೆ ಕೇಳು ಎಂದು ಉತ್ತರ ಬಂದಿತು.

ಚರ್ಚಿನ ಗಡಿಯಾರದಲ್ಲಿ ಟಂ ಟಂ ಎಂದು ಎರಡು ಘಂಟೆ ಹೊಡೆಯಿತು.

''ಮನುಷ್ಯತ್ವದಲ್ಲಿದ್ದು ಸಣ್ಣವಳಾಗಿದ್ದಾಗ ಒಬ್ಬ ವ್ಯಕ್ತಿಯನ್ನು ಕಂಡರೆ ಯಮನನ್ನು ಕಂಡಂತೆ ಅಂಜುತ್ತಿದ್ದೆ. ಆತ ನನ್ನ ಗಂಡ. ಗಾಳದಲ್ಲಿ ಮೀನನ್ನು ಹಿಡಿದರೆ ಅದಕ್ಕೆ ಹೇಗಾಗುತ್ತಿತ್ತೋ ನನಗೂ ಹಾಗೆ ಆಗುತ್ತಿತ್ತು. ಅರ್ಥಾತ್ ಯಾವುದೋ ಒಂದು ಸಂಪೂರ್ಣ ಅಪರಿಚಿತ ವ್ಯಕ್ತಿಯು ನನ್ನನ್ನು ಗಾಳದಲ್ಲಿ ಹಿಡಿದು ನನ್ನ ಸ್ನಿಗ್ಧಗಭೀರ ಜನ್ಮಜಲಾಶಯದಿಂದ ಎಳೆದುಕೊಂಡು ಹೋದಂತೆಯೂ, ಯಾವವಿಧದಿಂದಲೂ ಅವನ ಕೈಯಿಂದ ಮುಕ್ತಿಯಿಲ್ಲವೆಂದೂ ಅನಿಸುತ್ತಿತ್ತು. ಮದುವೆಯನಂತರ ಎರಡು ತಿಂಗಳು ತುಂಬುವುದರಲ್ಲೇ ನನ್ನಗಂಡನು ತೀರಿಕೊಂಡನು. ನನ್ನ ಆತ್ಮೀಯ ಸ್ವಜನರು ನನ್ನ ಪರವಾಗಿ ಬಹು ಗೋಳಾಡಿದರು. ನನ್ನ ಮಾವನವರು ಹಲವು ಲಕ್ಷಣಗಳನ್ನು ಹೋಲಿಸಿ ನೋಡಿ, ಅತ್ತೆಯೊಡನೆ 'ಶಾಸ್ತ್ರದಲ್ಲಿ ವಿಷಕನ್ಯೆಯೆಂದು ಹೇಳುತ್ತಾರಲ್ಲಾ ಈ ಹುಡುಗಿಯು ಅಂಥವಳು' ಎಂದು ಹೇಳಿದರು. ಆ ಮಾತು ನನಗೆ ಚೆನ್ನಾಗಿ ನೆನಪಿದೆ. ಕೇಳುತ್ತಿದ್ದಿಯೋ ಕಥೆ ಹೇಗಿದೆ ?"

"ಬಲು ಚೆನ್ನಾಗಿದೆ. ಕಥೆಯ ಆರಂಭ ಬಹು ಲಕ್ಷಣವಾಗಿದೆ" ಎಂದು ನಾನಂದೆ.

"ಹಾಗಾದರೆ ಕೇಳು. ಆನಂದದಿಂದ ತಂದೆಯ ಮನೆಗೆ ಹಿಂತಿರುಗಿದೆನು. ಕ್ರಮೇಣ ವಯಸ್ಸಾಯಿತು. ಜನರು ನನ್ನ ಹತ್ತಿರ ಗೋಪನ ಮಾಡಲು ಯತ್ನಿಸುತ್ತಿದ್ದರೂ ನನ್ನಂತಹ ರೂಪವತಿಯು ಎಲ್ಲಂದರಲ್ಲಿ ಸಿಕ್ಕುವುದು ಸಹಜವಲ್ಲವೆಂಬ ಸಂಗತಿಯನ್ನು ನಾನು ಚೆನ್ನಾಗಿ ತಿಳಿದಿದ್ದೆನು."

"ನಿನಗೆ ಹೇಗೆ ತೋರುತ್ತೆ."

"ಇರಬಹುದು, ಆದರೆ ನಾನು ನಿನ್ನನ್ನು ಎಂದೂ ನೋಡಿಲ್ಲವಲ್ಲ!"

"ನೋಡಿಲ್ಲವೇ, ಏಕೆ ನನ್ನ ಆ ಅಸ್ಥಿಪಂಜರವನ್ನು ಕಾಣೆಯೋ? ಹಿ.-ಹೀ-ಹಿ.ಹೀ ನಾನು ತಮಾಷೆಮಾಡುತ್ತಿರುವೆನಲ್ಲವೆ. ಆ ಕಣ್ಣುಗಳಿಲ್ಲದ ಎರಡು ಪೊಟ್ಟರೆಯಲ್ಲಿ ದೊಡ್ಡ ದೊಡ್ಡ ಎರಡು ಕಪ್ಪಾದ ಕಣ್ಣುಗಳಿದ್ದುವೆಂಬುದನ್ನು ನಿನಗೆ ನಾನು ಹೇಗೆ ಪ್ರಮಾಣಮಾಡಿಕೊಡಲಿ. ಈಗ ಅನಾವೃತವಾಗಿರುವ ಹಲ್ಲಿನ ಸಾಲಿನಮೇಲೆ ತೊಂಡೆಯ ಹಣ್ಣಿನಂತಹ ತುಟಿಯೂ, ಅದರಲ್ಲಿ ಮೃದುಹಾಸ್ಯಯುಕ್ತ ಹುಸಿನಗೆಯೂ ಇದ್ದುದನ್ನು ನಿನಗೆ ಹ್ಯಾಗೆ ರೂಪಿಸಲಿ. ಒಣಗಿರುವ ಆ ದೀರ್ಘ ಅಸ್ಥಿಗಳಮೇಲೆ ಅಷ್ಟೊಂದು ಲಾಲಿತ್ಯ, ಅಷ್ಟುಲಾವಣ್ಯ, ಯೌವನದ ಅಪೂರ್ವ ಕಠಿಣ ಕೋಮಲ ಪರಿಪೂರ್ಣತೆಯು ಪ್ರತಿದಿನವೂ ಪ್ರಸ್ಫುಟಿತವಾಗುತ್ತಿತ್ತಲ್ಲ, ಅದನ್ನು ನಿನಗೆ ಹೇಳಲು ಯತ್ನಿಸಿದರೆ ನಗುವಂತಾಗುವುದು ಮತ್ತು ಕೋಪವೂ ಬರುವುದು. ನನ್ನ ಆ ಶರೀರದಿಂದ ಅಸ್ತಿವಿದ್ಯೆಯನ್ನು ಕಲಿತುಕೊಳ್ಳಬಹುದೆಂಬುದನ್ನು ಆಗಿನ ದೊಡ್ಡ ದೊಡ್ಡ ಡಾಕ್ಟರುಗಳೂ ಧೈರ್ಯವಾಗಿ ಹೇಳಲು ಆಗದವರು. ನನಗೆ ತಿಳಿದ ಡಾಕ್ಟರೊಬ್ಬರು ತನ್ನ ಸ್ನೇಹಿತರೊಬ್ಬರೊಡನೆ ನನ್ನ ವಿಷಯವಾಗಿ ಮಾತನಾಡುತ್ತಾ ನನ್ನನ್ನು ಸಂಪಿಗೆ ಹೂವಿಗೆ ಹೋಲಿಸಿದ್ದರು. ಅದರ ಅರ್ಥವೇನೆಂದರೆ ಪ್ರಪಂಚದಲ್ಲಿನ ಇತರ ಮಾನವರೆಲ್ಲಾ ಅಸ್ಥಿ ವಿದ್ಯೆ ಮತ್ತು ಶರೀರ ತತ್ವದ ದೃಷ್ಟಾಂತ ಸ್ಥಲವಾಗಿದ್ದರು. ನಾನು ಮಾತ್ರ ಸೌಂದರ್ಯ ರೂಪೀ ಪುಷ್ಪದಂತೆ ಇದ್ದೆನು. ಸಂಪಿಗೆಯ ಹೂವಿನ ನಡುವೆ ಅಸ್ಥಿಪಂಜರವಿದೆಯೇನು?"

"ನಾನು ನಡೆದಾಗ ವಜ್ರದ ತುಂಡೊಂದನ್ನು ಅಲ್ಲಾಡಿಸಿದರೆ ಅದರ ನಾಲ್ಕೂ ಕಡೆಯಲ್ಲಿ ಪ್ರಕಾಶವು ಹೇಗೆ ಥಳಿಥಳಿಸುವುದೋ ಹಾಗೆ ತೋರುತ್ತಿತ್ತು. ನನ್ನ ಅಂಗಾಂಗಗಳ ಪ್ರತ್ಯೇಕ ಚಲನೆಯಲ್ಲೂ ಹಾಗೆಯೇ. ಸೌಂದರ್ಯದ ಭಂಗಿಯು ಹಲವು ಸ್ವಭಾವಿಕ ಚಂಚಲತೆಯೊಡನೆ ಸುತ್ತಲೂ ಶೋಭಿಸುತ್ತಿತು. ನಾನು ನಡುನಡುವೆ ಬಹುಕಾಲ ನನ್ನ ಎರಡು ಕೈಗಳನ್ನೂ ನೋಡುತ್ತ ಕುಳಿತಿರುತ್ತಿದ್ದೆನು. ಪೃಥ್ವಿಯ ಸಮಸ್ತ ಉದ್ಧತ ಪುರುಷರಿಗೂ ಮೂಗುದಾರಹಾಕಿ ಮೃದುಭಾವದಿಂದ ಕೋಪವನ್ನುಂಟುಮಾಡಬಲ್ಲ ಕೈಗಳವು. ಸುಭದ್ರೆಯು ಅರ್ಜುನನೊಡನೆ ಹೊರಟು ವೇಗವಾಗಿ ವಿಸ್ಮಿತರಾದ ಮೂರು ಲೋಕದ ಜನರ ನಡುವೆ ತನ್ನ ವಿಜಯ ರಥವನ್ನು ನಡೆಸಿಕೊಂಡು ಹೋಗಲಿಲ್ಲವೆ? ಅವಳಿಗೆ ಇಂತಹ ಲಕ್ಷಣವಾದ ಕೈಗಳಿದ್ದಿರಬೇಕು. ಆರಕ್ತ ಕರತಲವೂ, ಲಾವಣ್ಯಶಿಖೆಗಳಂತಹ ಬೆರಳುಗಳೂ ಇದ್ದಿರಬೇಕು."

"ಆದರೆ ನನ್ನ ಆ ನಿರ್ಲಜ್ಜ, ನಿರಾವೃತ, ಆಭರಣರಹಿತ ಚಿರವೃದ್ಧ ಅಸ್ಥಿಪಂಜರ ನನ್ನ ವಿಷಯವಾಗಿ ನಿನ್ನ ಬಳಿ ಸುಳ್ಳು ಸಾಕ್ಷಿ ಹೇಳಿದೆ. ಆಗ ನಾನು ನಿರುಪಾಯಳೂ ನಿರುತ್ತರಳೂ ಆಗಿದ್ದೆನು. ಆದ್ದರಿಂದಲೇ ಪೃಥ್ವಿಯಲ್ಲಿ ಎಲ್ಲರಿಗಿಂತಲೂ ಹೆಚ್ಚಾಗಿ ನಿನ್ನ ಮೇಲೆ ನನಗೆ ಕೋಪ. ನನ್ನ ಜೀವಂತವಾಗಿದ್ದ ಆ ಹದಿನಾರು ವರ್ಷ ವಯಸ್ಸಿನ ಯೌವನದ ತಾಪದಿಂದ ಉತ್ತಪ್ತವಾದ ಆರಕ್ತಿಮ ರೂಪವನ್ನು ನಿನ್ನ ಕಣ್ಣೆದಿರಿನಲ್ಲಿ ಕ್ಷಣಕಾಲ ನಿಲ್ಲಿಸಿ, ನಿನ್ನ ಕಣ್ಣಿನ ನಿದ್ರೆಯನ್ನು ಚಿರಕಾಲ ದೂರಗೊಳಿಸಿ, ನಿನ್ನ ಅಸ್ಥಿವಿದ್ಯೆಯನ್ನು ಅಸ್ಥಿರಗೊಳಿಸಿ ದೇಶಾಂತರಕ್ಕೆ ಓಡಿಸಬೇಕೆಂದು ಆಶೆಯಾಗುವುದು."

"ನಿನಗೆ ಮೈಯಿದ್ದಿದ್ದರೆ ನಿನ್ನನ್ನು ಮುಟ್ಟಿ ಸತ್ಯಮಾಡಿ ಆ ವಿದ್ಯೆಯು ನನ್ನ ತಲೆಯಲ್ಲಿ ಲೇಶಮಾತ್ರವೂ ಇಲ್ಲವೆಂಬುದನ್ನು ಸ್ಥಿರಪಡಿಸುತ್ತಿದ್ದೆ. ನಿನ್ನ ಆ ಭುವನ ಮೋಹನವಾದ ಪೂರ್ಣ ಯೌವನ ರೂಪವು, ರಜನಿಯ ಅಂಧಕಾರಪಟದ ಮೇಲೆ ಜಾಜ್ವಲ್ಯಮಾನವಾಗಿ ಅರಳಿ ಹೊಳೆಯುತ್ತಿದೆ. ಇದಕ್ಕೆ ಹೆಚ್ಚು ನನ್ನಿಂದ ಹೇಳಲು ಸಾಧ್ಯವಿಲ್ಲ" ಎಂದು ನಾನಂದೆನು.

"ನನ್ನ ಜೊತೆಗಾತಿಯರು ಯಾರೂ ಇರಲಿಲ್ಲ. ಅಣ್ಣನು ಮದುವೆ ಮಾಡಿಕೊಳ್ಳುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದನು. ಅಂತಃಪುರದಲ್ಲಿ ನಾನ

ಏಕಾಂಗಿನಿ. ತೋಟದ ಮರದಡಿಯಲ್ಲಿ ಒಂಟಿಯಾಗಿ ಕುಳಿತು ಯೋಚನೆ ಮಾಡುತ್ತಿದ್ದೆನು. 'ಪ್ರಪಂಚವೆಲ್ಲವೂ ನನ್ನನ್ನೇ ಪ್ರೀತಿಸುತ್ತಿದೆ. ನಕ್ಷತ್ರ ಗಳೆಲ್ಲವೂ ನನ್ನನ್ನೇ ನೋಡುತ್ತಿವೆ. ವಾಯುವು ಥಟ್ಟನೆ ದೀರ್ಘವಾದ ನಿಟ್ಟುಸಿರನ್ನು ಬಿಡುತ್ತ ಪಕ್ಕದಲ್ಲಿ ಹೋಗುತ್ತಿದೆ. ಕಾಲುಗಳನ್ನು ನೀಡಿ ಕೊಂಡು ಕುಳಿತಿರುವ ಹುಲ್ಲಿನ ಹಾಸಿಗೆಗೆ ಚೇತನಾಶಕ್ತಿಯಿದ್ದುದಾದರೆ ಅದು ನನ್ನನ್ನು ಸ್ಪರ್ಶಿಸಿ ಅಚೇತನವಾಗಿಬಿಡುತ್ತಿತ್ತು. ಪೃಥ್ವಿಯ ಎಲ್ಲ ಯೌವನ ಪುರುಷರೂ ಈ ತೃಣಪುಂಜದ ರೂಪದಲ್ಲಿ ಸಾಲುಗಟ್ಟಿ ನನ್ನ ಚರಣವರ್ತಿ ಗಳಾಗಿ ನಿಂತಿರುವರು' ಎಂಬೀ ರೀತಿಯಾಗಿ ನಾನು ಕಲ್ಪಿಸಿಕೊಳ್ಳುತ್ತಿದ್ದೆನು. ಹೃದಯದಲ್ಲಿ ಅಕಾರಣವಾಗಿ ಮಹಾವೇದನೆಯುಂಟಾಗುತ್ತಿತು.

"ಅಣ್ಣನ ಸ್ನೇಹಿತ ಶಶಿಶೇಖರನು ಮೆಡಿಕಲ್ ಕಾಲೇಜಿನಿಂದ ಪಾಸಾಗಿ ಬಂದನಂತರ ಅವನೇ ನಮ್ಮ ಮನೆಯ ಡಾಕ್ಟರನಾದನು. ಅದಕ್ಕೆ ಮುಂಚೆ ನಾನವನನ್ನು ಮರೆಯಿಂದ ಹಲವು ಬಾರಿ ನೋಡಿದ್ದೆನು. ಅಣ್ಣನು ಮಹಾ ವಿಚಿತ್ರ ವ್ಯಕ್ತಿಯಾಗಿದ್ದನು. ಕಣ್ಣುಬಿಟ್ಟು ಪೃಥ್ವಿಯನ್ನು ನೋಡುವವನೇ ಅಲ್ಲ."

"ಅವನ ಸ್ನೇಹಿತರೆಂದರೆ ಶಶಿಶೇಖರನೂ ಇನ್ನೂ ಕೆಲವರು ಮಾತ್ರವೇ. ಮತ್ತೆ ನಾನು ಸಂಜೆಯ ಹೊತ್ತಿನಲ್ಲಿ ಹೂವಿನ ಗಿಡದ ಅಡಿಯಲ್ಲಿ ಮಹಾ ರಾಣಿಯ ಆಸನವನ್ನು ಗ್ರಹಣಮಾಡಿದಾಗ ಪೃಥ್ವಿಯ ಸಮಸ್ತ ಪುರುಷ ಜಾತಿಯೂ ಶಶಿಶೇಖರನಲ್ಲಿ ಮೂರ್ತೀಭವಿಸಿ ನನ್ನ ಕಾಲಬಳಿ ನಿಲ್ಲುತ್ತಿತು. ಕೇಳುತ್ತಿರುವೆಯೇನು? ಮನಸ್ಸಿನಲ್ಲಿ ಏನು ಯೋಚಿಸುತ್ತಿರುವೆ?"

ನಾನು ನಿಟ್ಟುಸಿರನ್ನು ಬಿಡುತ್ತಾ ಶಶಿಶೇಖರನಾಗಿ ಜನ್ಮವೆತ್ತಿದ್ದರೆ ಚೆನ್ನಾ ಗಿತ್ತು ಎಂದು ಮನಸ್ಸಿಗೆ ತೋರುತ್ತಿದೆ' ಎಂದೆನು.

'ಮೊದಲು ಎಲ್ಲವನ್ನೂ ಕೇಳು.' ಮಳೆಗಾಲದಲ್ಲಿ ಒಂದು ದಿನ ನನಗೆ ಜ್ವರವಾಗಿತ್ತು. ನನ್ನನ್ನು ನೋಡಲು ಡಾಕ್ಟರು ಬಂದಿದ್ದರು. ಅದೇ ಮೊಟ್ಟ ಮೊದಲು ನೋಡಿದ್ದು. 'ನಾನು ಕಿಟಕಿಯಕಡೆ ಮುಖಹಾಕಿಕೊಂಡು ನಿಂತಿದ್ದೆ. ಸಂಜೆಯ ಬಿಸಿಲಿನ ಕಿರಣವು ಮುಖದ ಮೇಲೆ ಬಿದ್ದು ರುಗ್ಣಮುಖದ ವಿವರ್ಣ ತೆಯು ದೂರವಾಗಲೆಂಬ ಆಶೆಯಿತ್ತು. ಡಾಕ್ಟರನು ಕೋಣೆಯನ್ನು ಪ್ರವೇಶಿಸಿ

ಒಂದು ಸಲ ನನ್ನ ಮುಖದೆಡೆಗೆ ನೋಡಿದನು. ಆಗ ನಾನು ಮನದಲ್ಲೇ ಡಾಕ್ಟರಾಗಿ ನನ್ನ ಮುಖವನ್ನು ನೋಡತೊಡಗಿದೆನು. ಸ್ವಲ್ಪ ಕಠಿಣವಾದ ಹೂವಿನೆಸಳಿನಂತಹ ಮುಖ. ಕೆದರಿದ ಗುಂಗುರು ಕೂದಲುಗಳು ಹಣೆಯ ಮೇಲೆ ಬಿದ್ದಿದ್ದವು. ನಾಚಿಕೆಯಿಂದ ತಗ್ಗಿದ ದೊಡ್ಡ ದೊಡ್ಡ ಕಣ್ಣುಗಳ ರೆಪ್ಪೆಗಳು ಕಪೋಲದ ಮೇಲೆ ಛಾಯೆಯನ್ನು ವಿಸ್ತಾರಗೊಳಿಸಿದ್ದವು.'' ಡಾಕ್ಟರನು ಅತಿ ಮೆಲ್ಲಗೆ ಮೃದು ಸ್ವರದಿಂದ 'ಸ್ವಲ್ಪ ಕೈ ನೋಡಬೇಕ ಎಂದು ಅಣ್ಣನೊಡನೆ ಹೇಳಿದನು. ನಾನು ಸೆರಗಿನೊಳಗಿಂದ ಬಳಲಿದ್ದ ದುಂಡಾದ ಕೈಯನ್ನು ಹೊರಗೆ ನೀಡಿದೆನು. ಹಾಗೆಯೇ ಒಮ್ಮೆ ಕೈಯನ್ನು ದೃಷ್ಟಿಸಿ ನೋಡಿದೆನು. ನೀಲಿ ಬಣ್ಣದ ಗಾಜಿನ ಬಳೆಗಳನ್ನು ಹಾಕಿಕೊಂಡಿದ್ದರೆ ಚೆನ್ನಾಗಿರುತ್ತಿತ್ತು ಎಂದು ಅನಿಸಿತು. ರೋಗಿಯ ಕೈಯನ್ನು ಹಿಡಿದು ನಾಡಿಯನ್ನು ನೋಡುತ್ತ ಡಾಕ್ಟರನು ಅಷ್ಟು ಚಂಚಲನಾದುದನ್ನೂ ಮತ್ತೆಂದೂ ನಾನು ಕಂಡಿರಲಿಲ್ಲ. ಅತ್ಯಂತ ಅಸಂಲಗ್ನ ಭಾವದವನಾಗಿ ನಡುಗುತ್ತಿದ್ದ ಬೆರಳುಗಳಿಂದ ನಾಡಿ ಪರೀಕ್ಷಿಸಿದನು. ಆತನು ನನ್ನ ಜ್ವರದ ಉತ್ತಾಪವನ್ನರಿತನು. ನಾನೂ ಆತನ ಅಂತರ್ಯದ ನಾಡಿ ಹೇಗೆ ಚಲಿಸುತ್ತಿದೆ ಎಂಬವನ್ನು ತಕ್ಕಮಟ್ಟಿಗೆ ತಿಳಿದುಕೊಂಡೆನು. ನಂಬಲಾಗುವುದಿಲ್ಲವೇನು ?"

"ಅಪನಂಬಿಕೆಗೆ ಕಾರಣವೇನೂ ಕಾಣೆಸದು. ಮನುಷ್ಯರ ನಾಡಿಯು ಎಲ್ಲ ಪರಿಸ್ಥಿತಿಯಲ್ಲೂ ಒಂದೇ ಮಾದರಿಯಾಗಿ ಚಲಿಸದು '' ಎಂದೆನು.

"ಕಾಲಕ್ರಮದಲ್ಲಿ ಮತ್ತೆ ಮೂರು ನಾಲ್ಕು ಬಾರಿ ರೋಗಿಯಾಗಿ ಆರೋಗ್ಯ ಹೊಂದಿದನಂತರ ನನ್ನ ಆ ಸಂಜೆಯ ಮನೋರಾಜ್ಯದ ಸಭೆಯಲ್ಲಿ ಪೃಥ್ವಿಯ ಕೋಟಿಕೋಟಿ ಮನುಷ್ಯರ ಸಂಖ್ಯೆಯು ಕ್ರಮೇಣ ಕಡಿಮೆಯಾಗುತ್ತ ಬಂದು, ಕೊನೆಗೆ ಒಂದೇ ಒಂದು ವ್ಯಕ್ತಿಯಲ್ಲಿ ಕೊನೆಗಂಡಿತು. ನನ್ನ ಪ್ರಪಂಚವು ಪ್ರಾಯಶಃ ಜನಶೂನ್ಯವಾಯಿತು. ನನ್ನ ಜಗತ್ತಿನಲ್ಲಿ ಕೇವಲ ಒಬ್ಬ ಡಾಕ್ಟರನೂ ಒಬ್ಬಳೇ ರೋಗಿಯೂ ಉಳಿದರು.

"ನಾನು ಗುಟ್ಟಾಗಿ ಸಂಜೆಯ ವೇಳೆಯಲ್ಲಿ ಒಂದು ವಾಸಂತೀ ಬಣ್ಣದ ಸೀರೆಯನ್ನು ಉಟ್ಟುಕೊಂಡು ಲಕ್ಷಣವಾಗಿ ಹೆರಳು ಹಾಕಿಕೊಂಡು ಮಲ್ಲಿಗೆಯ ದಂಡೆಯೊಂದನ್ನು ತುರುಬಿನಲ್ಲಿ ಮುಡಿದುಕೊಳ್ಳುತ್ತಿದ್ದೆನು. ಕೈಯಲ್ಲೊಂದು ಕನ್ನಡಿಯನ್ನು ಹಿಡಿದು ತೋಟಕ್ಕೆ ಹೋಗಿ ಕುಳಿತಿರುತ್ತಿದ್ದೆನು.

"ಏಕೆ ಗೊತ್ತೋ ? ನನ್ನನ್ನು ಎಷ್ಟು ನೋಡಿಕೊಂಡರೂ ನನಗೆ ತೃಪ್ತಿಯಾಗುತ್ತಿರಲಿಲ್ಲ. ನಿಜವಾಗಿಯೂ ಇಲ್ಲ. ಏಕೆಂದರೆ ನನ್ನನ್ನು ನಾನೇ ನೋಡುತ್ತಿರಲಿಲ್ಲ. ಆಗ ನಾನು ಒಂಟಿಯಾಗಿದ್ದರೂ ಎರಡು ವ್ಯಕ್ತಿಯಾಗುತ್ತಿದ್ದೆನು. ಡಾಕ್ಟರಾಗಿ ನನ್ನನ್ನು ನೋಡುತ್ತಿದ್ದೆನು. ಮುಗ್ಧಳಾಗಿ ಪ್ರೀತಿಯಲ್ಲಿ ಮುಳುಗಿ ಆನಂದಿಸುತ್ತಿದ್ದೆನು. ಹಾಗೆಯೇ ಪ್ರಾಣದೊಳಗಿನಿಂದ ಒಂದು ದೀರ್ಘ ನಿಟ್ಟುಸಿರು ಹೊರಟು ಸಂಜೆಯ ವಾಯುವಿನಂತೆ ಹೊರಬೀಳುತ್ತಿತ್ತು."

"ಆಗಿನಿಂದ ನಾನು ಒಂಟಿಯಾಗಿ ಇರುತ್ತಿರಲಿಲ್ಲ. ನಡೆಯುವಾಗ ನತನೇತ್ರಳಾಗಿ ಕಾಲಿನ ಬೆರಳುಗಳು ಭೂಮಿಯ ಮೇಲೆ ಹೇಗೆ ಬೀಳುತ್ತಿವೆಯೆಂಬುದನ್ನು ನೋಡುತ್ತಿದ್ದೆನು. ಹಾಗೆಯೇ ಈ ಕಾಲಿನ ಸಪ್ಪಳವು ನಮ್ಮ ಹೊಸದಾಗಿ ಪಾಸ್ ಮಾಡಿದ ಡಾಕ್ಟರನ ಮೇಲೆ ಯಾವ ಪ್ರಭಾವವನ್ನುಂಟು ಮಾಡುವುದೆಂದು ಆಲೋಚಿಸುತ್ತಿದ್ದೆನು. ಮಧ್ಯಾಹ್ನದಲ್ಲಿ ಕಿಟಕಿಯಿಂದ ಹೊರಗೆ ನೋಡಿದರೆ ಎಲ್ಲೂ ಶಬ್ದವಿಲ್ಲದೆ ಬಿಕೋ ಎನ್ನುತ್ತಿತ್ತು. ನಡು ನಡುವೆ ದೂರದ ಆಕಾಶದಿಂದ ಹದ್ದಿನ ಕೂಗು ಕೇಳಿಸುತ್ತಿತ್ತು. ನಮ್ಮ ಉದ್ಯಾನವನದ ಗೋಡೆಯ ಹೊರಗಡೆ ಬೀದಿಯಲ್ಲಿ ಮಾರಾಟಗಾರರು 'ಆಟದ ಸಾಮಾನು ಬೇಕೇ-ಬಳೆ ಬೇಕೇ-ಎಂದು ಕೂಗಿಕೊಂಡು ಹೋಗ್ತುತ್ತಿದ್ದರು. ನಾನೊಂದು ತೆಳುವಾದ ಹೊದಿಕೆಯನ್ನು ಹೊದ್ದುಕೊಂಡು ಮಲಗುತ್ತಿದ್ದೆನು. ಒಂದು ಕೈಯನ್ನು ಹಾಸಿಗೆಯ ಮೇಲೆ ಅಸಡ್ಡೆಯಿಂದ ನೀಡಿಕೊಂಡು ಮಲಗಿರುತ್ತಿದ್ದೆನು. ಯಾರೋ ಆ ಕೈಯನ್ನು ಆ ರೀತಿಯಲ್ಲಿ ನೋಡಿದ ಹಾಗೂ, ತಮ್ಮ ಎರಡು ಕೈಗಳಿಂದ ಆ ಕೈಯನ್ನು ಎತ್ತಿ ಹಿಡಿದುಕೊಂಡ ಹಾಗೂ, ಅದರ ಆರಕ್ತ ಕರತಲದ ಮೇಲೆ ಒಂದು ಚುಂಬನವನ್ನಿಟ್ಟು ಮೆಲು ನಡಿಗೆಯಲ್ಲಿ ಮಾಯವಾದಂತೆಯೂ ನನ್ನ ಮನಸ್ಸಿನಲ್ಲಿ ಭಾವನೆಯಾಗುತ್ತಿತ್ತು.—ಯೋಚಿಸಿ ನೋಡು. ಇಷ್ಟಕ್ಕೇ ಕಥೆಯು ಮುಗಿದರೆ ಹೇಗಿರುವುದು ?"

"ಅಷ್ಟೇನೂ ಕೆಡುವುದಿಲ್ಲ. ಸ್ವಲ್ಪ ಅಸಂಪೂರ್ಣವಾಗಿರುವುದಷ್ಟೆ. ಆದರೆ ಅದನ್ನು ನನ್ನ ಮನಸ್ಸಿನಲ್ಲೇ ಮುಗಿಸಿಕೊಳ್ಳಲು ಯತ್ನಿಸಿ ಉಳಿದಿರುವ ರಾತ್ರಿಗಳನ್ನು ಸುಲಭವಾಗಿ ಕಳೆಯಬಹುದು" ಎಂದೆನು.

"ಆದರೆ ಹಾಗೆ ಮಾಡಿದರೆ ಕಥೆಯು ಬಹು ಗಂಭೀರವಾಗುವುದು. ಅವರ ಉಪಹಾಸವು ಎಲ್ಲಿರುವುದು? ಇವರ ಒಳಗಿನ ಅಸ್ಥಿಪಂಜರವು ತನ್ನ ಎಲ್ಲ ಹಲ್ಲುಗಳನ್ನೂ ಕಿರಿದುಕೊಂಡು ತೋರಿಸುವುದೆಲ್ಲಿಂದ?

"ಮುಂದಿನ ಕಥೆಯನ್ನು ಕೇಳು. ಸ್ವಲ್ಪ ಗಿರಾಕಿಗಳು ಕೂಡಿದನಂತರ ಡಾಕ್ಟರನು ನಮ್ಮ ಮನೆಯ ಕೆಳಭಾಗದಲ್ಲಿ ತನ್ನ ಔಷಧಾಲಯವನ್ನು ತೆರೆದನು. ಆಗ ನಾನು ಆಗಾಗ್ಗೆ ಅಲ್ಲಿಗೆ ಹೋಗಿ ನಗುತ್ತ ನಗುತ್ತ ಔಷಧದ ವಿಷಯಗಳು, ವಿಷದ ಸಂಗತಿಗಳು, ಏನು ಮಾಡಿದರೆ ಮನುಷ್ಯನು ಸಹಜವಾಗಿ ಸಾಯುವನು, ಇತ್ಯಾದಿ ವಿಷಯಗಳನ್ನೆಲ್ಲಾ ವಿಚಾರಿಸಿ ತಿಳಿದುಕೊಳ್ಳುತ್ತಿದ್ದೆನು. ವೈದ್ಯಕೀಯ ವಿಷಯವನ್ನೆತ್ತಿದರೆ ಡಾಕ್ಟರ ಮುಖವು ಅರಳುತ್ತಿತ್ತು. ಅವರ ಮಾತುಗಳನ್ನು ಕೇಳಿ ಕೇಳಿ ಮೃತ್ಯುವು ಅತಿ ಪರಿಚಿತವಾದ ಮನೆಯ ವ್ಯಕ್ತಿಯಂತೆ ಆಯಿತು. ಪ್ರೇಮ ಮತ್ತು ಮರಣ ಇವೆರಡನ್ನೇ ಪೃಥ್ವಿಯಲ್ಲಿ ಎಲ್ಲೆಲ್ಲೂ ನೋಡತೊಡಗಿದೆನು."

"ನನ್ನ ಕಥೆಯು ಬಹುಮಟ್ಟಿಗೆ ಮುಗಿಯುತ್ತ ಬಂದಿದೆ. ಇನ್ನು ಹೆಚ್ಚಾಗಿ ಉಳಿದಿಲ್ಲ."

"ರಾತ್ರಿಯೂ ಬಹು ಮಟ್ಟಿಗೆ ಮುಗಿಯುತ್ತ ಬಂತು" ಎಂದು ನಾನೂ ಮೃದು ಸ್ವರದಿಂದ ಹೇಳಿದೆನು.

"ಕೆಲವು ದಿನಗಳಿಂದ ಡಾಕ್ಟರನು ಅನ್ಯಮನಸ್ಕರಾಗಿದ್ದುದನ್ನೂ ನನ್ನ ಬಳಿಯಲ್ಲಿ ಬಂದಾಗ ವಿಶೇಷ ಅಪ್ರತಿಭನಾಗಿರುತ್ತಿದ್ದುದನ್ನೂ ಕಂಡಿದ್ದೆನು. ಅಣ್ಣನ ಹತ್ತಿರ ಹೋಗಿ ಹಲವು ವಿಷಯಗಳನ್ನೆತ್ತಿ ಮಾತನಾಡಿ ಕೊನೆಗೆ 'ಹೌದಣ್ಣ, ಡಾಕ್ಟರರು ಇಂದು ಜೋಡಿ ಕುದುರೆ ಸಾರೋಟನಲ್ಲಿ ಎಲ್ಲಿಗೆ ಹೊರಟಿರುವರು?" ಎಂದು ಕೇಳಿದೆ.

"ಅಣ್ಣ 'ಸಾಯಲು' ಎಂದು ಸಂಕ್ಷೇಪವಾಗಿ ಹೇಳಿದನು."

"ಇಲ್ಲ. ನಿಜವಾಗಿ ಹೇಳಣ್ಣ" ಎಂದು ನಾನು ಕೇಳಿದೆನು.

"ಅವನು ಮೊದಲಿಗಿಂತ ಇನ್ನೂ ಸ್ವಲ್ಪ ಸಿಧಾನವಾಗಿ ಮಾತನಾಡುತ್ತ 'ಮದುವೆ ಮಾಡಿಕೊಳ್ಳಲು' ಎಂದನು."

'ನಿಜವಾಗಿ' ಎಂದು ನಾನೇ ಕೇಳಿ ಬಲವಾಗಿ ನಗತೊಡಗಿದೆನು.

"ಈ ಮದುವೆಯಲ್ಲಿ ಡಾಕ್ಟರಿಗೆ ಹನ್ನೆರಡು ಸಾವಿರ ರೂಪಾಯಿಗಳು ಸಿಕ್ಕುವದೆಂದೂ, ಇನ್ನೂ ಹಲವು ವಿಷಯಗಳನ್ನೂ ಮೆಲ್ಲಮೆಲ್ಲಗೆ ತಿಳಿದು ಕೊಂಡೆನು.

"ಆದರೆ ಈ ಸುದ್ದಿಯನ್ನು ನನ್ನಲ್ಲಿ ಮುಚ್ಚಿಟ್ಟು ನನ್ನನ್ನು ಅವಮಾನ ಗೊಳಿಸುವುದರ ಅರ್ಥವೇನು? ನಾನೇನು ಅವರ ಕಾಲು ಕಟ್ಟಿಕೊಂಡು 'ಇಂತಹ ಕೆಲಸ ಮಾಡಿದರೆ ನಾನು ಎದೆಯೊಡೆದು ಸಾಯುವೆನು' ಎಂದು ಹೇಳಿದ್ದೆನೇ? ಪುರುಷರನ್ನು ನಂಬಲಾಗದು. ಪ್ರಪಂಚದಲ್ಲಿ ನಾನು ಪುರುಷ ನನ್ನು ಒಬ್ಬನನ್ನೇ ನೋಡಿರುವೆನು. ಕ್ಷಣ ಮಾತ್ರದಲ್ಲಿ ಎಲ್ಲ ತಿಳುವಳಿಕೆ ಯನ್ನೂ ಹೊಂದಿದೆನು.

'ಡಾಕ್ಟರರು ಕಾಯಿಲೆಯವರನ್ನೆಲ್ಲಾ ನೋಡಿ ಸಂಜೆಗೆ ಮುಂದೆ ಮನೆ ಯೊಳಕ್ಕೆ ಕಾಲಿಟ್ಟಾಗ ನಾನು ನಗು-ನಗುತ್ತ, 'ಏನು ಡಾಕ್ಟರ್ ಮಹಾ ಶಯರೇ! ಇವತ್ತು ನಿಮ್ಮ ಮದುವೆಯಲ್ಲವೇ?' ಎಂದೆನು.

"ನನ್ನ ಪ್ರಫುಲ್ಲತೆಯನ್ನು ಕಂಡು ಡಾಕ್ಟರು ಕೇವಲ ಅಪ್ರತಿಭರಾದು ದಷ್ಟೇ ಅಲ್ಲ, ಬಹು ಅಸಂತುಷ್ಟರೂ ಆದರು.

"'ಬಾಜಾ ಬಜಂತ್ರಿಗಳೇನೂ ಇಲ್ಲವೇನು?' ಎಂದು ಕೇಳಿದೆನು.

"ನನ್ನ ಮಾತುಗಳನ್ನು ಕೇಳಿ ಅವರು ನಿಟ್ಟುಸಿರು ಬಿಡುತ್ತ 'ಮದುವೆಯ ಪ್ರಸ್ತಾಪ ಅಷ್ಟು ಆನಂದಕರವಾದ ಸಂಗತಿಯೇನು?' ಎಂದರು.

"ಆ ಮಾತುಗಳನ್ನು ಕೇಳಿ ನನಗೆ ನಕ್ಕು ನಕ್ಕು ಹೊಟ್ಟೆ ಹುಣ್ಣಾಯಿತು. ಇಂತಹ ಮಾತನ್ನು ನಾನೆಂದೂ ಕೇಳಿರಲಿಲ್ಲ. 'ಅದೆಲ್ಲಾ ಸರಿಯಲ್ಲ— ವಾದ್ಯಗಳು ಬೇಕು ದೀಪಗಳನ್ನು ತರಿಸಬೇಕು' ಎಂದೆನು.

"ಅಣ್ಣನನ್ನು ಬಹುವಾಗಿ ಪೀಡಿಸಲು ಅವನು ಕೂಡಲೇ ಪದ್ಧತಿಯಂತೆ ಉತ್ಸವದ ಏರ್ಪಾಟು ಮಾಡುವುದರಲ್ಲಿ ತೊಡಗಿದನು.

"ನಾನು ಸುಮ್ಮನೆ ಹರಟತೊಡಗಿದೆ. ವಧುವಿನ ಕೈಹಿಡಿದು ಕರೆ ತಂದಾಗ ಏನಾಗಬೇಕು, ಏನು ಮಾಡಬೇಕು – ಎಂಬ ವಿಷಯಗಳನ್ನು ಕೇಳಿದನಂತರ 'ಒಳ್ಳೇದು ಡಾಕ್ಟರವರೇ – ಆಗಲೂ ನೀವೇನು ರೋಗಿಗಳ ನಾಡಿ ಹಿಡಿದು ತಿರುಗುವಿರೇನು ?' ಎಂದು ಕೇಳಿ ಹೀ–ಹೀ–ಹೀ–ಹೀ ಎಂದು ನಕ್ಕೆನು. ಮಾನವರ, ಮುಖ್ಯವಾಗಿ ಪುರುಷರ, ಮನಸ್ಸು ದೃಷ್ಟಿ ಗೋಚರವಲ್ಲವಿದ್ದರೂ, ನನ್ನ ಮಾತುಗಳನ್ನು ಕೇಳಿದಾಗ ಡಾಕ್ಟರ ಎದೆಯಲ್ಲಿ ಶೂಲವನ್ನು ಇರಿದಂತಾಯಿತೆಂಬ ಸಂಗತಿಯನ್ನು ನಾನು ಆಣೆಯಿಟ್ಟು ಹೇಳ ಬಲ್ಲೆ.

"ರಾತ್ರಿ ಬಹು ಹೊತ್ತಿನ ಮೇಲೆ ಲಗ್ನವು ನಿಶ್ಚಯವಾಗಿತ್ತು. ಸಂಜೆಯಲ್ಲಿ ಡಾಕ್ಟರು ಬಿಸಿಲುಮುಹಡಿಯ ಮೇಲೆ ಅಣ್ಣನ ಸಂಗಡ ಕುಳಿತು ಒಂದೆರಡು ಬಟ್ಟಲು ಮಧುವನ್ನು ಸೇವಿಸುತ್ತಿದ್ದರು. ಇದು ಅವರ ದಿನಗಟ್ಟಲೆಯ ಪದ್ಧತಿ. ಕ್ರಮೇಣ ಆಕಾಶದಲ್ಲಿ ಚಂದ್ರನು ಉದಯಿಸಿದನು.

"ನಾನು ನಗುತ್ತ ನಗುತ್ತ 'ಡಾಕ್ಟರವರೇ, ಮರೆತುಹೋದಿರೇನು ? ದಿಬ್ಬಣದ ಹೊತ್ತಾಗಲಿಲ್ಲವೇ ?' ಎಂದೆನು.

"ಇಲ್ಲಿ ಒಂದು ಸಣ್ಣ ವಿಷಯವನ್ನು ಹೇಳುವುದು ಆವಶ್ಯಕವಾಗಿದೆ. ಈ ಮಧ್ಯೆ ನಾನು ಗುಟ್ಟಾಗಿ ವೈದ್ಯಶಾಲೆಗೆ ಹೋಗಿ ಒಂದು ಪುಡಿಯನ್ನು ಸ್ವಲ್ಪ ಸಂಗ್ರಹಿಸಿಕೊಂಡು ಬಂದಿದ್ದೆನು. ಆ ಪುಡಿಯಲ್ಲಿ ಸ್ವಲ್ಪವನ್ನು ಅನು ಕೂಲವಾದ ವೇಳೆಯಲ್ಲಿ ಯಾರಿಗೂ ಕಾಣದಂತೆ ಡಾಕ್ಟರ ಗ್ಲಾಸಿನಲ್ಲಿ ಹಾಕಿ ಬೆರಸಿದ್ದೆನು. ಯಾವ ಪುಡಿಯನ್ನು ತಿಂದರೆ ಮನುಷ್ಯನು ಸಾಯುವನು ಎಂಬ ವಿಷಯವನ್ನು ಡಾಕ್ಟರ ಬಳಿಯಲ್ಲೇ ಕಲಿತಿದ್ದೆನು.

"ಡಾಕ್ಟರು ಒಂದೇ ಗುಟುಕಿನಲ್ಲಿ ಗ್ಲಾಸನ್ನು ಖಾಲಿಮಾಡಿ ಕಿಂಚಿತ್ ಆರ್ದ್ರ ಗದ್ಗದ ಕಂಠದಿಂದ ನನ್ನ ಕಡೆ ಮರ್ಮಾಂತಿಕ ದೃಷ್ಟಿಯಿಂದ ನೋಡಿ, 'ಸರಿ ಹೊರಡುತ್ತೇನೆ' ಎಂದರು."

"ವಾದ್ಯವನ್ನು ಬಾರಿಸತೊಡಗಿದರು. ನಾನೊಂದು ಕಾಶೀ ಪೀತಾಂಬರ ವನ್ನುಟ್ಟುಕೊಂಡೆನು. ಪೆಟ್ಟಿಗೆಯಲ್ಲಿದ್ದ ಒಡವೆಗಳನ್ನೆಲ್ಲಾ ಹೊರಕ್ಕೆ ತೆಗೆದು

ತೊಟ್ಟುಕೊಂಡೆನು. ಬೈತಲೆಯಲ್ಲಿ ದೊಡ್ಡದಾಗಿ ಸಿಂಧೂರವನ್ನು ಹಚ್ಚಿ ಕೊಂಡೆನು. ನನ್ನ ನಿತ್ಯದ ಆ ಬಕುಳ ಗಿಡದಡಿಯಲ್ಲಿ ಹಾಸಿಗೆಯನ್ನು ಸಿದ್ಧ ಪಡಿಸಿದೆನು.

"ಬಹು ಸುಂದರ ರಾತ್ರಿ. ಹಾಲು ಚೆಲ್ಲಿದಂತಹ ಬೆಳದಿಂಗಳು. ನಿದ್ರಿತ ಜಗತ್ತಿನ ಬಳಲಿಕೆಯನ್ನು ಪರಿಹರಿಸುತ್ತ ದಕ್ಷಿಣ ಗಾಳಿ ಬೀಸುತ್ತಿತ್ತು. ಮಲ್ಲಿಗೆ ಮೊದಲಾದ ಹೂಗಳ ಪರಿಮಳದಿಂದ ತೋಟವೆಲ್ಲ ಆನಂದಮಯ ವಾಗಿತ್ತು. ವಾದ್ಯದ ಶಬ್ದ ದೂರ ಹೋಯಿತು. ಬೆಳದಿಂಗಳು ಕಳೆದು ಕತ್ತಲು ಕವಿಯತೊಡಗಿತು. ಈ ತರುಪಲ್ಲವಗಳು, ಆಕಾಶ ಮತ್ತು ನಾನು ಹುಟ್ಟಿ ಬೆಳೆದ ಆ ಮನೆ ಇವೆಲ್ಲವುಗಳೊಡನೆ ವಿಶ್ವಸೃಷ್ಟಿಯು ನನ್ನ ಸುತ್ತಲೂ ಮಾಯೆಯಂತೆ ಕತ್ತಲಲ್ಲಿ ಮರೆಯಾಗ ತೊಡಗಿದಾಗ ನಾನು ನಿಮೀಲಿತ ನೇತ್ರಳಾಗಿ ನಗ ತೊಡಗಿದೆನು.

"ಜನರು ಬಂದು ನನ್ನನ್ನು ನೋಡುವಾಗ ಈ ನಗುವು ಬಣ್ಣ ಬಣ್ಣದ ಮನೋಹರ ಲೀಲೆಯಂತೆ ನನ್ನ ತುಟಿಯ ಮೇಲೆ ಪ್ರಕಾಶಿಸುತ್ತಿರಲೆಂದು ನನ್ನ ಆಶೆಯಿತ್ತು."

"ನನ್ನ ಚಿರಕಾಲದ ವಾಸವ ಗೃಹದಲ್ಲಿ ಮೆಲ್ಲ ಮೆಲ್ಲಗೆ ಪ್ರವೇಶ ಮಾಡು ವಾಗ ಈ ನಗುವನ್ನು ಇಲ್ಲಿಂದಲೇ ಮುಖದ ಮೇಲೆ ಇಟ್ಟುಕೊಂಡು ಇರ ಬೇಕೆಂಬ ಆಶೆಯು ನನಗಿತ್ತು. ಎಲ್ಲಿ ವಾಸವ ಗೃಹ? ನನ್ನ ಆ ವಿವಾಹದ ವೇಷವೆಲ್ಲಿ? ನನ್ನೊಳಗಿನಿಂದ ಹೊರಟು ಬಂದ ಖಟ್ ಖಟ್ ಶಬ್ದ ಕೇಳಿ ಎಚ್ಚೆತ್ತು ನೋಡಿದೆನು. ನನ್ನನ್ನು ಹಿಡಿದುಕೊಂಡು ಮೂವರು ಬಾಲಕರು ಅಸ್ಥಿ ವಿದ್ಯೆಯನ್ನು ಕಲಿಯುತ್ತಿದ್ದರು. ಹೃದಯದಲ್ಲಿ ಎಲ್ಲಿ ಸುಖ ದುಃಖಗಳು ದಡ ದಡಗುಟ್ಟುತ್ತಿದ್ದವೋ, ಎಲ್ಲಿ ಯೌವನದ ಎಸಳುಗಳು ಪ್ರತಿದಿನವೂ ಒಂದೊಂ ದಾಗಿ ಪ್ರಸ್ಫುಟಿತವಾಗುತ್ತಿದ್ದವೋ ಅಲ್ಲಿ ಕೋಲನ್ನು ತೋರಿಸಿ ಯಾವ ಮೂಳೆಗೆ ಯಾವ ಹೆಸರೆಂಬುದನ್ನು ಮಾಸ್ಟರು ಹೇಳಿಕೊಳ್ಳುತ್ತಿದ್ದರು."

"ಮತ್ತು ತುಟಿಗಳ ಮೇಲೆ ಆ ಕೊನೆಯ ನಗುವನ್ನು ಅರಳಿಸಿದ್ದೆನಲ್ಲಾ ಅದರ ನೆಲೆಯನ್ನೇನಾದರೂ ಕಂಡಿರೇನು?"

"ಕಥೆಯು ಹೇಗಿತ್ತು."

"ಕಥೆಯು ಅತ್ಯಂತ ಪ್ರಫುಲ್ಲಕರವಾಗಿತ್ತು" ಎಂದು ನಾನು ಹೇಳಿದೆನು.

ಅಷ್ಟು ಹೊತ್ತಿಗೆ ಮೊದಲ ಕಾಗೆ ಕೂಗಿತು.

'ಇನ್ನೂ ಉಳಿದಿದೆಯೇನು? ಎಂದು ಪ್ರಶ್ನಿಸಿದೆನು. ಯಾವ ಉತ್ತರವೂ ಬರಲಿಲ್ಲ.'

ಕೊಠಡಿಯೊಳಕ್ಕೆ ಮುಂಜಾನೆಯ ಬೆಳಕು ಪ್ರವೇಶಿಸಿತು.

———:———

## ಒನಕೆಯ ಪೆಟ್ಟು (ಒರಳಿನಲ್ಲಿ ಕುಳಿತರೆ . . )

ಬಾಬುಗಳ ನಾಯಬ ಗಿರೀಶ ಬಸುವಿನ ಅಂತಃಪುರದಲ್ಲಿ ಪ್ಯಾರೀ ಎಂಬ ಹೆಸರಿನ ಹೊಸ ದಾಸಿ ಕೆಲಸಕ್ಕೆ ಸೇರಿದಳು ಅವಳಿಗೆ ಚಿಕ್ಕ ವಯಸ್ಸು. ಗುಣವೂ ಒಳ್ಳೆಯದು. ಸಚ್ಚರಿತ್ರಳು. ದೂರದ ಪರದೇಶದಿಂದ ಬಂದು ಕೆಲಕಾಲ ಕೆಲಸಮಾಡಿದನಂತರ ಅವಳು ವೃದ್ಧ ನಾಯಬರ ಅನು ರಾಗ ದೃಷ್ಟಿಯಿಂದ ತನ್ನನ್ನು ರಕ್ಷಿಸಿಕೊಳ್ಳುವ ಉದ್ದೇಶದಿಂದ ಗೃಹಿಣಿಯ ಹತ್ತಿರ ಹೋಗಿ ಅಳುತ್ತ ಕಾಲಿಗೆ ಬಿದ್ದಳು. ಗೃಹಿಣಿಯು ಮಗೂ, ನೀನು ಮತ್ತೆಲ್ಲಾದರೂ ಹೋಗು. ನೀನು ಉತ್ತಮರ ಮಗಳು. ಇಲ್ಲಿದ್ದರೆ ನಿನಗೆ ಒಳ್ಳೆಯದಾಗದು ಎಂದು ಹೇಳಿ ಗುಟ್ಟಾಗಿ ಸ್ವಲ್ಪ ಹಣವನ್ನು ಕೊಟ್ಟು ಕಳುಹಿಸಿ ಬಿಟ್ಟಳು.

ಆದರೆ ಪಲಾಯನಮಾಡುವುದು ಸಹಜಕಾರ್ಯವಲ್ಲ. ದಾರಿಯವೆಚ್ಚಕ್ಕೆ ಕೈಯಲ್ಲಿ ಸಾಕಾದಷ್ಟು ಹಣವೂ ಇರಲಿಲ್ಲ. ಅದರಿಂದ ಪ್ಯಾರಿಯು ಆ ಗ್ರಾಮದ ಹರಿಹರ ಭಟ್ಟಾಚಾರ್ಯರ ಬಳಿ ಹೋಗಿ ಸೇರಿದಳು. ವ್ಯವಹಾರ ಜ್ಞಾನ ವುಳ್ಳ ಮಕ್ಕಳು 'ಅಪ್ಪಾ-ಹಾದಿಯಲ್ಲಿ ಹೋಗುವ ಮಾರಿಯನ್ನು ಮನೆಗೇಕೆ ಸೇರಿಸಿಕೊಳ್ಳುತ್ತಿರುವೆ'—ಎಂದು ಕೇಳಿದರು. ಹರಿಹರನು 'ಮಾರಿ ಸ್ವತಃ ಬಂದು ಆಶ್ರಯ ಬೇಡಿದರೆ ಅವಳನ್ನು ಹಿಂತಿರುಗಿಸಲಾಗುವುದಿಲ್ಲ' ಎಂದನು.

ಗಿರೀಶ ಬಸುವು ಸಾಷ್ಟಾಂಗ ಪ್ರಣಾಮಮಾಡಿ—"ಭಟ್ಟಾಚಾರ್ಯ ಮಹಾಶಯಾ! ನೀವು ನಮ್ಮ ಮನೆಯ ಕೆಲಸದವಳನ್ನೇಕೆ ಹಾರಿಸಿಕೊಂಡು ಬಂದಿರಿ. ಮನೆಯಲ್ಲಿ ಕೆಲಸಕ್ಕೆ ಬಹು ಕಷ್ಟವಾಗುತ್ತಿದೆ" ಎಂದನು. ಅದಕ್ಕೆ ಪ್ರತ್ಯುತ್ತರವಾಗಿ ಭಟ್ಟಾಚಾರ್ಯರು ನಾಲ್ಕಾರು ಸತ್ಯ ವಚನಗಳನ್ನು ಕಠಿಣ ವಾದ ಧ್ವನಿಯಲ್ಲೇ ಹೇಳಿದರು. ಅವರು ಮಾನಿಷ್ಠರು. ಯಾರ ದಾಕ್ಷಿಣ್ಯ ಕ್ಕಾದರೂ ಯಾವ ವಾತನ್ನಾದರೂ ಮರೆಮಾಚುವುದನ್ನು ಅರಿಯದವರು.

ನಾಯಬನು ಮನದಲ್ಲೇ ಅವರನ್ನು ರೆಕ್ಕೆ ಹುಟ್ಟಿದ ಇರುವೆಗೆ ಹೋಲಿಸುತ್ತ ಹೊರಟು ಹೋದನು. ಹೋಗುವ ಸಮಯದಲ್ಲಿ ಅವರ ಕಾಲಿಗೆರಗಿ ಹೋದನು. ನಾಲ್ಕಾರು ದಿನಗಳಲ್ಲೇ ಭಟ್ಟಾಚಾರ್ಯನ ಮನೆಗೆ ಪೋಲೀಸರ ಪ್ರವೇಶವಾಯಿತು. ಭಟ್ಟಾಚಾರ್ಯರ ಗೃಹಿಣಿಯ ತಲೆದಿಂಬಿನ ಬುಡದಲ್ಲಿ ನಾಯಬನ ಹೆಂಡತಿಯ ಓಲೆಯ ಜೊತೆಗಳು ಸಿಕ್ಕಿದವು. ಕೆಲಸದವಳಾದ ಪ್ಯಾರಿ ಕಳ್ಳಿಯೆಂದು ರುಜುವಾತಾಗಿ ಜೈಲು ಸೇರಿದಳು. ಭಟ್ಟಾಚಾರ್ಯ ಮಹಾಶಯರು ದೇಶವಿಖ್ಯಾತ ಆಸ್ತಿಯ ಬಲದಿಂದ ಕದ್ದ ಒಡವೆಯನ್ನು ಸ್ವೀಕರಿಸಿದ ತಪ್ಪಿನಿಂದ ಪಾರಾದರು. ನಾಯಬನು ಬಂದು ಬ್ರಾಹ್ಮಣನನ್ನು ಕಂಡು ಕಾಲಿಗೆರಗಿ ಹೋದನು. ಆ ನಿರ್ಭಾಗ್ಯಳಿಗೆ ತಾನು ಆಶ್ರಯಕೊಟ್ಟದ್ದರಿಂದ ಅವಳ ಸರ್ವನಾಶವಾಯಿತೆಂದು ಬ್ರಾಹ್ಮಣನಿಗೆ ಅರ್ಥವಾಯಿತು. ಅವರ ಹೃದಯದಲ್ಲಿ ಶೂಲವು ನಾಟಿಕೊಂಡಿತ್ತು. 'ಭೂಮಿಕಾಣಿಯನ್ನು ಮಾರಿ ಕಲ್ಕತ್ತೆಗೆ ಹೋಗಿ ಸೇರೋಣ ಇಲ್ಲಿ ಬಹು ಕಷ್ಟ ಒದಗುವಂತಿದೆ' ಎಂದು ಮಕ್ಕಳು ಹೇಳಿದರು. 'ಪಿತ್ರಾರ್ಜಿತ ಭೂಮಿಯನ್ನು ಬಿಡುವುದು ಸಾಧ್ಯವಾಗುದಲ್ಲ. ಹಣೆಯಲ್ಲಿ ಬರದಿದ್ದರೆ ಎಲ್ಲಿದ್ದರೆ ತಾನೆ ವಿಪತ್ತು ತಪ್ಪುವುದು ಎಂದನು.'

ಈ ಮಧ್ಯೆ ನಾಯಬನು ಅಳತೆ ಮಾರಿ ಕಂದಾಯ ಹೆಚ್ಚಿಸಲು ರೈತರು ದಂಗೆಯೆದ್ದರು. ಹರಿಹರ ಭಟ್ಟಾಚಾರ್ಯನ ಬ್ರಹ್ಮಸ್ವತ್ತೆಲ್ಲಾ ಜಪ್ತಿಯಾಯಿತು. ಜಮೀಂದಾರರಿಗೆ ಏನೂ ತಿಳಿಯದು. ನಾಯಬನು ಯಜಮಾನರೊಡನೆ ಹರಿಹರನು ರೈತರಿಗೆ ಬೆಂಬಲವಾಗಿ ನಿಂತು ಅವರನ್ನು ವಿದ್ರೋಹಿಗಳನ್ನಾಗಿ ಮಾಡಿರುವನೆಂದು ತಿಳಿಸಿದನು. ಜಮೀಂದಾರರು ಹೇಗೆ ಸಾಧ್ಯವೋ ಹಾಗೆ ಭಟ್ಟಾಚಾರ್ಯರಿಗೆ ತಕ್ಕ ಶಾಸ್ತಿ ಮಾಡೆಂದು ಅಪ್ಪಣೆ ಕೊಟ್ಟರು. ನಾಯಬನು ಬಂದು ಭಟ್ಟಾಚಾರ್ಯರ ಕಾಲಿಗೆರಗಿ—'ಎದುರಿಗಿರುವ ಈ ಭೂಮಿ ಜಮೀಂದಾರರ ಸ್ವತ್ತಿನಲ್ಲಿ ಸೇರಿದ್ದು ಅದನ್ನು ಬಿಟ್ಟು ಕೊಡಬೇಕಾಗಿರುವುದು' ಎಂದನು. ಹರಿಹರನು 'ಅದೆಂತಹ ಮಾತು. ಅದು ನಮ್ಮ ಪೂರ್ವಜರಿಂದ ಅನುಭವಿಸುತ್ತಿರುವ ಬ್ರಹ್ಮಸ್ವತ್ತು' ಎಂದನು. ಹರಿಹರನ ಮನೆಗೆ ಸೇರಿದ್ದ ಹಾಗಿದ್ದ ಭೂಮಿ ಜಮೀಂದಾರರ ಆಸ್ತಿಯಲ್ಲಿ ಸೇರಿದ್ದು ಎಂದು ಮೊಕದ್ದಮೆ ದಾಖಲಾಯಿತು. ಹರಿಹರನು 'ಮುಪ್ಪಿನಲ್ಲಿ ನಾನು ಕೋರ್ಟಿನಲ್ಲಿ ಸಾಕ್ಷಿ ಹೇಳಲಾರೆನು. ಈ ಭೂಮಿಯನ್ನು ಬಿಟ್ಟು

ಬಿಡೋಣ' ಎಂದನು. 'ಮನೆಗೆ ಸೇರಿದ ಭೂಮಿಯನ್ನು ಬಿಟ್ಟುಕೊಡುವು ದಾದರೆ ಇನ್ನು ಮನೆ ಹೇಗೆ ನಿಲ್ಲುವುದು' ಎಂದರು.

ಪ್ರಾಣಕ್ಕಿಂತಲೂ ಹಿರಿಯದಾದ ಪೈತೃಕ ಭೂಮಿಯ ಮಾಯೆಯಿಂದ ವೃದ್ಧನು ಕಂಪಿತಪದದೊಡನೆ ಕೋರ್ಟಿನ ಸಾಕ್ಷಿಯ ಕಟಕಟೆಯಲ್ಲಿ ಹೋಗಿ ನಿಂತನು. ಮುನ್ಸಿಫ್ ನವಗೋಪಾಲ ಬಾಬುಗಳು ಅವನ ಹೇಳಿಕೆಯನ್ನು ಅಂಗೀಕರಿಸಿ ಮೊಕದ್ದಮೆಯನ್ನು ವಜಾಮಾಡಿದರು. ಭಟ್ಟಾಚಾರ್ಯರ ಶಿಷ್ಯರು ಈ ಸಮಯದಲ್ಲಿ ಗ್ರಾಮದಲ್ಲಿ ಭಾರೀ ಉತ್ಸವ ಮಾಡತೊಡಗಿದರು. ಹರಿಹರನು ಅವಸರದಿಂದ ಅವರನ್ನು ತಡೆದನು. ನಾಯಬನು ಬಂದು ಅತಿ ಆಡಂಬರದೊಡನೆ ಭಟ್ಟಾಚಾರ್ಯರ ಕಾಲಿಗೆರಗಿ ಹೋಗಿ ಅಪೀಲು ದಾಖಲ್‌ಮಾಡಿದನು. ವಕೀಲರು ಹರಿಹರನ ಹತ್ತಿರ ಹಣ ಕೇಳಲಿಲ್ಲ. ಅವರು ಈ ಮೊಕದ್ದಮೆಯಲ್ಲಿ ಸೋಲುವ ಸಂದರ್ಭವೇ ಇಲ್ಲವೆಂದು ಬ್ರಾಹ್ಮಣ ನೊಡನೆ ಬಾರಿ ಬಾರಿಗೆ ಹೇಳಿದರು. 'ಹಗಲು ಎಂದಾದರೂ ರಾತ್ರಿಯಾಗಲು ಸಾಧ್ಯವೇ' ಎಂದರು. ಬ್ರಾಹ್ಮಣನು ನಿಶ್ಚಿಂತನಾಗಿ ಮನೆಯಲ್ಲಿ ಕುಳಿತನು.

ಒಂದು ದಿನ ಜಮೀನ್ದಾರಿಯ ಕಛೇರಿಯ ಆಳುಗಳು ನಾಯಬರ ಮನೆ ಯಲ್ಲಿ ಮರಿಗಳನ್ನು ಕೊಯ್ದು ಕಾಳೀ ಪೂಜೆಯಾಗುವುದೆಂದು ಡಂಗೂರ ಹೊಡೆದರು. ಭಟ್ಟಾಚಾರ್ಯರು ಸಂಗತಿಯೇನೆಂದು ವಿಚಾರಿಸಲು ಅಪೀಲಿನಲ್ಲಿ ಅವರಿಗೆ ಸೋಲಾಯಿತೆಂದು ತಿಳಿಯಿತು.

ಭಟ್ಟಾಚಾರ್ಯರು ತಲೆಕೆರೆಯುತ್ತ ವಕೀಲರೊಡನೆ 'ವಸಂತ್‌ಬಾಬೂ! ಏನಾಯಿತು ನನ್ನ ಗತಿಯೇನು' ಎಂದರು.

ಹಗಲು ಹೇಗೆ ರಾತ್ರಿಯಾಯಿತೆಂಬುದರ ಗೂಢ ರಹಸ್ಯವನ್ನು ವಸಂತ ಬಾಬುಗಳು ತಿಳಿದರು—'ಈಚೆಗೆ ಹೊಸ ಅಡಿಷನಲ್ ಜಡ್ಜಿಯಾಗಿ ಬಂದಿರುವ ವರು ಮುನ್‌ಸೀಫರಾಗಿದ್ದಾಗ ಮುನ್‌ಸೀಫ್ ನವಗೋಪಾಲ ಬಾಬುಗಳಿಗೂ ಅವರಿಗೂ ಬಹು ರಗಳೆಯಾಗಿತ್ತಂತೆ. ಆಗ ಏನುಮಾಡಲು ಶಕ್ತರಾಗಿರಲಿಲ್ಲ. ಇಂದು ಜಡ್ಜಿಯ ಪೀಠದಲ್ಲಿ ಕುಳಿತನಂತರ ನವಗೋಪಾಲ್ ಬಾಬುಗಳ ತೀರ್ಪುಗಳು ಅವರ ಕೈ ಸೇರಿದರಾಯಿತು; ತಕ್ಷಣ ಅದಕ್ಕೆ ವಿರೋಧವಾಗಿ ಬರೆಯುತ್ತಿರುವರು. ನೀವು ಸೋತದ್ದಕ್ಕೆ ಅದೇ ಕಾರಣ' ಎಂದರು.

ವ್ಯಾಕುಲನಾದ ಹರಿಹರನು 'ಹೈಕೋರ್ಟಿನಲ್ಲಿ ಇದಕ್ಕೆ ಅಪೀಲೇನೂ ಇಲ್ಲವೇ' ಎಂದನು. 'ಜಡ್ಜರು ಅದಕ್ಕೆ ಅವಕಾಶವನ್ನೇ ಇಟ್ಟಿಲ್ಲ. ನಿಮ್ಮ ಸಾಕ್ಷಿಗಳನ್ನು ಸಂದೇಹಿಸಿ ಎದುರು ಕಕ್ಷಿಗಳ ಸಾಕ್ಷಿಗಳೇ ಸರಿ ಎಂದು ಬರೆದಿರುವರು. ಹೈಕೋರ್ಟಿನಲ್ಲಿ ಸಾಕ್ಷಿಗಳ ವಿಚಾರಣೆಗೆ ಅವಕಾಶವಿಲ್ಲವಲ್ಲ' ಎಂದರು.

ವೃದ್ಧನು ಹಾಗಾದರೆ ನನ್ನ ಗತಿ? ಎಂದು ಕಣ್ಣೀರು ಸುರಿಸಿದರು.

ಮಾರುದಿನ ಗಿರೀಶಬಸುವು ಕೆಲವು ಜನರನ್ನು ಸಂಗಡ ಕರೆದುಕೊಂಡು ಬಂದು ಬಗ್ಗಿ ಬ್ರಾಹ್ಮಣನ ಕಾಲಿಗೆ ಎರಗಿ ನಡೆದನು—ಹೋಗುವ ವೇಳೆಯಲ್ಲಿ ದೀರ್ಘ ನಿಶ್ವಾಸವನ್ನು ಬಿಟ್ಟು ಪ್ರಭು—ನಿನ್ನಿಚ್ಛೆ—ಎಂದು ಹೇಳುತ್ತ ನಡೆದನು.

---

# ಸಂಪತ್ - ಸಮರ್ಪಣೆ

## (ಪ್ರಥಮ ಪರಿಚ್ಛೇದ)

ವೃಂದಾವನ ಕುಂಡು ಮಹಾಕ್ರುದ್ಧನಾಗಿ ತಂದೆಯ ಹತ್ತಿರ ಬಂದು – 'ಇದೋ—ಈಕ್ಷಣ ನಾನು ಹೊರಟೆ' ಎಂದನು.

ಅಪ್ಪ ಯಜ್ಞನಾಥ ಕುಂಡು— 'ಅಕೃತಜ್ಞ .... ಮಗ ಚಿಕ್ಕಂದಿನಿಂದ ಊಟ ಉಪಚಾರ—ಉಡುಗೆ ತೊಡಿಗೆಗಳಿಗಾಗಿ ಖರ್ಚಾಗಿದೆಯಲ್ಲ ಅದರಲ್ಲಿ ಒಂದು ಎಳ್ಳಷ್ಟು ತೀರಿಸೋಣ ಅನ್ನೋ ಮಾತೇ ಇಲ್ಲ—ಕಣ್ಣು ತೋರಿಸು ತ್ತಾನೆ—ಕಣ್ಣ ಎಂದನು.

ಯಜ್ಞನಾಥನ ಮನೆಯಲ್ಲಿದ್ದ ಅಶನ-ವಸನದ ಪದ್ಧತಿಯನ್ನು ನೋಡಿ ದರೆ ಅದರಿಂದ ಅವನಿಗೆ ಹೆಚ್ಚು ವೆಚ್ಚವಾಗುವದೆಂದು ಹೇಳಲು ಅವಕಾಶವೇ ಇರಲಿಲ್ಲ. ಹಿಂದಿನ ಕಾಲದಲ್ಲಿ ಋಷಿಗಳು ತಮ್ಮ ಆಹಾರ ಮತ್ತು ಬಟ್ಟೆ ಬರೆಗಳ ವಿಷಯದಲ್ಲಿ ಎಷ್ಟು ಅಲ್ಪ ವೆಚ್ಚಮಾಡುತ್ತಿದ್ದರೆಂದು ತಿಳಿಯಲಾಶಿಸುವರು. ಯಜ್ಞನಾಥನ ನಡವಳಿಕೆಯಲ್ಲಿ ಅದರ ಉದಾಹರಣೆಯನ್ನು ಕಾಣಬಹು ದಾಗಿತ್ತು. ಈ ವಿಷಯಗಳಲ್ಲಿ ಈತನಿಗೂ ಅವರಂತೆಯೇ ಉಚ್ಚಧ್ಯೇಯ ವಿತ್ತು. ಆದರೆ ಈ ವಿಷಯದಲ್ಲಿ ಅವನು ಸಂಪೂರ್ಣವಾಗಿ ಸಿದ್ಧಿ ಹೊಂದಲಾರ ದವನಾಗಿದ್ದನು. ಆಧುನಿಕ ಸಮಾಜದ ದೋಷವೂ, ದೇಹರಕ್ಷಣೆಯ ವಿಷಯ ವಾಗಿ ಪ್ರಕೃತಿಯ ಅನ್ಯಾಯವೂ ಅದಕ್ಕೆ ಕಾರಣಗಳಾಗಿದ್ದವು.

ಮಗನು ಮದುವೆಯಾಗುವವರೆಗೆ ಎಲ್ಲವನ್ನೂ ಸಹಿಸಿಕೊಂಡಿದ್ದನು. ಆದರೆ ಮದುವೆಯ ನಂತರ ಊಟ ತಿಂಡಿ ಉಡಿಗೆ ತೊಡಿಗೆಗಳ ವಿಷಯದಲ್ಲಿ ಅಪ್ಪನ ಪದ್ಧತಿಗೂ ಮಗನ ಪದ್ಧತಿಗೂ ಹೊಂದಿಕೆಯಿಲ್ಲವಾಯಿತು. ಕ್ರಮೇಣ ಮಗನ ಗುರಿ ಆಧ್ಯಾತ್ಮಿಕತೆಗಿಂತ ಆಧಿಭೌತಿಕತೆಯ ಕಡೆಗೆ ಇಳಿಯುತ್ತಿ ದ್ದುದು ಕಾಣುತ್ತಿತ್ತು. ಮಳೆ - ಬಿಸಿಲು ಹಸಿವು - ನೀರಡಿಕೆ ಇವುಗಳಿಂದ

ಸೊಂದ ಪಾರ್ಥಿವ ಸಮಾಜದ ಅನುಕರಣದಿಂದ ಬಟ್ಟೆ ಬರೆಗಳಲ್ಲಿ ನಾಜೋಕು ಮತ್ತು ಆಹಾರದ ಪ್ರಮಾಣ ಇವುಗಳು ಕ್ರಮೇಣ ಬೆಳೆಯುತ್ತ ಹೋದುವು.

ಈ ಕಾರಣವಾಗಿ ತಂದೆ ಮಕ್ಕಳಿಗೆ ಸಾಮಾನ್ಯವಾಗಿ ಮಾತು ಬೆಳೆಯುತ್ತಿತ್ತು. ಕೊನೆಗೆ ವೃಂದಾವನನ ಹೆಂಡತಿಯು ಬಲವಾಗಿ ಖಾಯಿಲೆ ಬಿದ್ದಾಗ ಕವಿರಾಜನು ಬಹು ಬೆಲೆಯ ಔಷಧವೊಂದನ್ನು ನಿಯಮಿಸಿದನು. ಯಜ್ಞನಾಥನು ಅದರಿಂದ ಕವಿರಾಜನ ಅನುಭವಹೀನತೆಯನ್ನು ಕಂಡುಕೊಂಡು ತಕ್ಷಣ ಅವನನ್ನು ಕಳುಹಿಸಿಬಿಟ್ಟು ಬೇರೊಬ್ಬ ವೈದ್ಯನನ್ನು ಕರೆತಂದನು. ವೃಂದಾವನನು ಮೊದಲು ತಂದೆಯ ಕಾಲಿಗೆಬಿದ್ದು ಬೇಡಿಕೊಂಡನು. ಅನಂತರ ಕೋಪದಿಂದ ಕೂಗಾಡಿದನು. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಹೆಂಡತಿಯು ಸಾಯಲು ಅಪ್ಪನನ್ನು ಸ್ತ್ರೀಹತ್ಯಾಕಾರಿಯೆಂದು ಬೈದನು.

ಅಪ್ಪನು—ಏಕೋ! ಔಷಧಿ ತಿಂದವರು ಯಾರೂ ಸಾಯುವುದೇ ಇಲ್ಲವೇನು? ಹೆಚ್ಚು ಬೆಲೆಯ ಔಷಧಿ ತಿಂದರೇ ಬದುಕುವುದಾದರೆ ರಾಜರುಗಳೂ, ಬಾದಷಹರುಗಳೂ ಯಾವ ದುಃಖದಿಂದ ಸಾಯುತ್ತಿರುವರು. ನಿಮ್ಮ ಅಮ್ಮನು ಯಾವ ವಿಧದಲ್ಲಿ ಸತ್ತಳೋ, ನಿಮ್ಮ ಚಿಕ್ಕಮ್ಮನು ಹೇಗೆ ಸತ್ತಳೋ ನಿನ್ನ ಹೆಂಡತಿಯು ಮಾತ್ರ ಅವರೆಲ್ಲರಿಗಿಂತ ಹೆಚ್ಚು ಆಡಂಬರದೊಡನೆ ಸಾಯಬೇಕಾಗಿತ್ತೇನು?" ಎಂದನು.

ವಾಸ್ತವದಲ್ಲಿ ಶೋಕದಿಂದ ಅಂಧನಾಗದೆ ವೃಂದಾವನನು ಸ್ಥಿರಚಿತ್ತದೊಡನೆ ಆಲೋಚಿಸಿದ್ದರೆ ಈ ಮಾತುಗಳಿಂದ ಬಹುಮಟ್ಟಿಗೆ ಸಮಾಧಾನ ಹೊಂದುತ್ತಿದ್ದನು. ಅವನ ತಾಯಿ—ಚಿಕ್ಕಮ್ಮ ಇವರುಗಳಲ್ಲಿ ಯಾರೂ ಸಾಯುವಾಗ ಔಷಧ ಕುಡಿಯಲಿಲ್ಲ. ಈ ಮನೆಯಲ್ಲಿ ಹಿಂದಿನಿಂದ ನಡೆದುಬಂದ ಪದ್ಧತಿ ಹೀಗೆಯೇ. ಆದರೆ ಈ ಕಾಲದವರು ಹಿಂದಿನ ಕಾಲದವರಂತೆ ಸಾಯಲೂ ಇಷ್ಟಪಡರು. ಈ ಸಂಗತಿ ನಡೆವ ಕಾಲದಲ್ಲಿ [illegible] ಹಳಬರು ಅಂದಿನ ಆಧುನಿಕರ ವ್ಯವಹಾರವನ್ನು ಕಂಡು ಬುದ್ಧಿಗೆಟ್ಟು ಹೆಚ್ಚಾಗಿ ತಂಬಾಕು ಸೇದುತ್ತಿದ್ದರು.

ಅದಿರಲಿ. ಆ ಕಾಲದ ಆಧುನಿಕನಾದ ವೃಂದಾವನನು ಆಗಿನ ಪುರಾ

# ಸಂಪತ್ - ಸಮರ್ಪಣೆ

## (ಪ್ರಥಮ ಪರಿಚ್ಛೇದ)

ವೃಂದಾವನ ಕುಂಡು ಮಹಾಕ್ರುದ್ಧನಾಗಿ ತಂದೆಯ ಹತ್ತಿರ ಬಂದು– 'ಇದೋ—ಈಕ್ಷಣ ನಾನು ಹೊರಟೆ' ಎಂದನು.

ಅಪ್ಪ ಯಜ್ಞನಾಥ ಕುಂಡು—'ಅಕೃತಜ್ಞ .... ಮಗ ಚಿಕ್ಕಂದಿನಿಂದ ಊಟ ಉಪಚಾರ—ಉಡುಗೆ ತೊಡಿಗೆಗಳಿಗಾಗಿ ಖರ್ಚಾಗಿದೆಯಲ್ಲ ಅದರಲ್ಲಿ ಒಂದು ಎಳ್ಳಷ್ಟು ತೀರಿಸೋಣ ಅನ್ನೋ ಮಾತೇ ಇಲ್ಲ—ಕಣ್ಣು ತೋರಿಸುತ್ತಾನೆ—ಕಣ್ಣ ಎಂದನು.

ಯಜ್ಞನಾಥನ ಮನೆಯಲ್ಲಿದ್ದ ಅಶನ-ವಸನದ ಪದ್ಧತಿಯನ್ನು ನೋಡಿದರೆ ಅದರಿಂದ ಅವನಿಗೆ ಹೆಚ್ಚು ವೆಚ್ಚವಾಗುವದೆಂದು ಹೇಳಲು ಅವಕಾಶವೇ ಇರಲಿಲ್ಲ. ಹಿಂದಿನ ಕಾಲದಲ್ಲಿ ಋಷಿಗಳು ತಮ್ಮ ಆಹಾರ ಮತ್ತು ಬಟ್ಟೆ ಬರೆಗಳ ವಿಷಯದಲ್ಲಿ ಎಷ್ಟು ಅಲ್ಪ ವೆಚ್ಚಮಾಡುತ್ತಿದ್ದರೆಂದು ತಿಳಿಯಲಾಶಿಸುವರು. ಯಜ್ಞನಾಥನ ನಡವಳಿಕೆಯಲ್ಲಿ ಅದರ ಉದಾಹರಣೆಯನ್ನು ಕಾಣಬಹುದಾಗಿತ್ತು. ಈ ವಿಷಯಗಳಲ್ಲಿ ಈತನಿಗೂ ಅವರಂತೆಯೇ ಉಚ್ಚಧ್ಯೇಯವಿತ್ತು. ಆದರೆ ಈ ವಿಷಯದಲ್ಲಿ ಅವನು ಸಂಪೂರ್ಣವಾಗಿ ಸಿದ್ಧಿ ಹೊಂದಲಾರದವನಾಗಿದ್ದನು. ಆಧುನಿಕ ಸಮಾಜದ ದೋಷವೂ, ದೇಹರಕ್ಷಣೆಯ ವಿಷಯವಾಗಿ ಪ್ರಕೃತಿಯ ಅನ್ಯಾಯವೂ ಆದಕ್ಕೆ ಕಾರಣಗಳಾಗಿದ್ದವು.

ಮಗನು ಮದುವೆಯಾಗುವವರೆಗೆ ಎಲ್ಲವನ್ನೂ ಸಹಿಸಿಕೊಂಡಿದ್ದನು. ಆದರೆ ಮದುವೆಯ ನಂತರ ಊಟ ತಿಂಡಿ ಉಡಿಗೆ ತೊಡಿಗೆಗಳ ವಿಷಯದಲ್ಲಿ ಅಪ್ಪನ ಪದ್ಧತಿಗೂ ಮಗನ ಪದ್ಧತಿಗೂ ಹೊಂದಿಕೆಯಿಲ್ಲವಾಯಿತು. ಕ್ರಮೇಣ ಮಗನ ಗುರಿ ಅಧ್ಯಾತ್ಮಿಕತೆಗಿಂತ ಆಧಿ ಭೌತಿಕತೆಯ ಕಡೆಗೆ ಇಳಿಯುತ್ತಿದ್ದುದು ಕಾಣುತ್ತಿತ್ತು. ಮಳೆ - ಬಿಸಿಲು ಹಸಿವು - ನೀರಡಿಕೆ ಇವುಗಳಿಂದ

ನೊಂದ ಪಾರ್ಥಿವ ಸಮಾಜದ ಅನುಕರಣದಿಂದ ಬಟ್ಟೆ ಬರೆಗಳಲ್ಲಿ ನಾಜೋಕು ಮತ್ತು ಆಹಾರದ ಪ್ರಮಾಣ ಇವುಗಳು ಕ್ರಮೇಣ ಬೆಳೆಯುತ್ತ ಹೋದುವು.

ಈ ಕಾರಣವಾಗಿ ತಂದೆ ಮಕ್ಕಳಿಗೆ ಸಾಮಾನ್ಯವಾಗಿ ಮಾತು ಬೆಳೆಯುತ್ತಿತ್ತು. ಕೊನೆಗೆ ವೃಂದಾವನನ ಹೆಂಡತಿಯು ಬಲವಾಗಿ ಖಾಯಿಲೆ ಬಿದ್ದಾಗ ಕವಿರಾಜನು ಬಹು ಬೆಲೆಯ ಔಷಧವೊಂದನ್ನು ನಿಯಮಿಸಿದನು. ಯಜ್ಞನಾಥನು ಅದರಿಂದ ಕವಿರಾಜನ ಅನುಭವಹೀನತೆಯನ್ನು ಕಂಡು ಕೊಂಡು ತಕ್ಷಣ ಅವನನ್ನು ಕಳುಹಿಸಿಬಿಟ್ಟು ಬೇರೊಬ್ಬ ವೈದ್ಯನನ್ನು ಕರೆ ತಂದನು. ವೃಂದಾವನನು ಮೊದಲು ತಂದೆಯ ಕಾಲಿಗೆಬಿದ್ದು ಬೇಡಿ ಕೊಂಡನು. ಅನಂತರ ಕೋಪದಿಂದ ಕೂಗಾಡಿದನು. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಹೆಂಡತಿಯು ಸಾಯಲು ಅಪ್ಪನನ್ನು ಸ್ತ್ರೀ ಹತ್ಯಾಕಾರಿಯೆಂದು ಬೈದನು.

ಅಪ್ಪನು—ಏಕೋ! ಔಷಧಿ ತಿಂದವರು ಯಾರೂ ಸಾಯುವುದೇ ಇಲ್ಲವೇನು? ಹೆಚ್ಚು ಬೆಲೆಯ ಔಷಧಿ ತಿಂದರೇ ಬದುಕುವುದಾದರೆ ರಾಜರುಗಳೂ, ಬಾದಷಹರುಗಳೂ ಯಾವ ದುಃಖದಿಂದ ಸಾಯುತ್ತಿರುವರು. ನಿಮ್ಮ ಅಮ್ಮನು ಯಾವ ವಿಧದಲ್ಲಿ ಸತ್ತಳೋ, ನಿಮ್ಮ ಚಿಕ್ಕಮ್ಮನು ಹೇಗೆ ಸತ್ತಳೋ ನಿನ್ನ ಹೆಂಡತಿಯು ಮಾತ್ರ ಅವರೆಲ್ಲರಿಗಿಂತ ಹೆಚ್ಚು ಆಡಂಬರದೊಡನೆ ಸಾಯಬೇಕಾಗಿತ್ತೇನು?" ಎಂದನು.

ವಾಸ್ತವದಲ್ಲಿ ಶೋಕದಿಂದ ಅಂಧನಾಗದೆ ವೃಂದಾವನನು ಸ್ಥಿರ ಚಿತ್ತದೊಡನೆ ಆಲೋಚಿಸಿದ್ದರೆ ಈ ಮಾತುಗಳಿಂದ ಬಹುಮಟ್ಟಿಗೆ ಸಮಾಧಾನ ಹೊಂದುತ್ತಿದ್ದನು. ಅವನ ತಾಯಿ—ಚಿಕ್ಕಮ್ಮ ಇವರುಗಳಲ್ಲಿ ಯಾರೂ ಸಾಯುವಾಗ ಔಷಧ ಕುಡಿಯಲಿಲ್ಲ. ಈ ಮನೆಯಲ್ಲಿ ಹಿಂದಿನಿಂದ ನಡೆದುಬಂದ ಪದ್ಧತಿ ಹೀಗೆಯೇ. ಆದರೆ ಈ ಕಾಲದವರು ಹಿಂದಿನ ಕಾಲದವರಂತೆ ಸಾಯಲೂ ಇಷ್ಟಪಡರು. ಈ ಸಂಗತಿ ನಡೆದ ಕಾಲದಲ್ಲಿ ಅಂಗ್ಲರ ಹಳಬರು ಅಂದಿನ ಆಧುನಿಕರ ವ್ಯವಹಾರವನ್ನು ಕಂಡು ಬುದ್ಧಿಗೆಟ್ಟು ಹೆಚ್ಚಾಗಿ ತಂಬಾಕು ಸೇದುತ್ತಿದ್ದರು.

ಅದಿರಲಿ. ಆ ಕಾಲದ ಆಧುನಿಕನಾದ ವೃಂದಾವನನು ಆಗಿನ ಪುರಾ

ತನ ಯಜ್ಞನಾಥನೊಡನೆ ವಾದ ವಿವಾದಮಾಡಿ ಕೊನೆಗೆ—"ಇದೊ! ನಾನು ಹೊರಟೆ" ಎಂದನು.

ಅಪ್ಪನು ಅವನಿಗೆ ತಕ್ಷಣವೇ ಹೊರಟುಹೋಗಲು ಅನುಮತಿ ಕೊಟ್ಟು ಎಲ್ಲರ ಇದಿರಿನಲ್ಲೂ—ವೃಂದಾವನನಿಗೆ ತಾನೇನಾದರೂ ಒಂದು ಕುರುಡು ಕಾಸನ್ನು ಕೊಟ್ಟದ್ದೇ ಆದರೆ ಗೋಹತ್ಯ ಮಾಡಿದ ಹಾಗೆ—ಎಂದು ಶಪಥ ಮಾಡಿದನು. ವೃಂದಾವನು ಎಲ್ಲರ ಇದಿರಿನಲ್ಲಿ—ತಾನೇನಾದರೂ ಯಜ್ಞನಾಥನ ಕೈಯ ಕಾಸನ್ನು ಮುಟ್ಟಿದರೆ ಮಾತೃಹತ್ಯ ಮಾಡಿದ ಹಾಗೆ—ಎಂದು ಶಪಥ ಮಾಡಿದನು. ಅನಂತರ ತಂದೆ ಮಕ್ಕಳು ಬೇರೆ ಬೇರೆಯಾಗಿ ಹೊರಟು ಹೋದರು.

ಬಹುಕಾಲದ ಶಾಂತಿಯ ನಂತರ ಇಂತಹದೊಂದು ಸಣ್ಣ ವಿಪ್ಲವದಿಂದ ಗ್ರಾಮ ವಾಸಿಗಳಿಗೆ ಸ್ವಲ್ಪ ವಿಚಿತ್ರ ಆನಂದವಾಯಿತು. ಮುಖ್ಯವಾಗಿ ಯಜ್ಞನಾಥನ ಮಗನು ಉತ್ತರಾಧಿಕಾರದ ಹಕ್ಕನ್ನು ಕಳೆದುಕೊಂಡ ನಂತರ ಗ್ರಾಮದ ಪ್ರತಿಯೊಬ್ಬರೂ ಯಜ್ಞನಾಥನ ಪುತ್ರವಿಯೋಗ ದುಃಖವನ್ನು ನಿವಾರಿಸಲು ತಮ್ಮಿಂದಾದಷ್ಟು ಪ್ರಯತ್ನ ಮಾಡುತ್ತಿದ್ದರು. ಸಾಮಾನ್ಯವಾಗಿ ಒಬ್ಬಳು ಹೆಂಡತಿಗಾಗಿ ತಂದೆಯೊಡನೆ ಜಗಳವಾಡುವುದು ಈ ಕಾಲದವ ರಿಂದಲೇ ಸಾಧ್ಯವೆಂದು ಎಲ್ಲರೂ ಹೇಳಿದರು.

ವಿಶೇಷವಾಗಿ ಅವರುಗಳು ಒಂದು ಯುಕ್ತಿಯ ಮಾತನ್ನಾಡಿದರು—"ಒಬ್ಬ ಹೆಂಡತಿಯು ಹೋದರೆ ಕಾಲ ವಿಳಂಬವಾಗದೆ ಮತ್ತೊಬ್ಬಳನ್ನು ತರ ಬಹುದು. ಆಂರೆ ಅಪ್ಪನು ಹೋದರೆ ಮತ್ತೊಬ್ಬ ಅಪ್ಪನನ್ನು ಸಂಗ್ರಹಿಸು ವುದು ತಲೆ ಚಚ್ಚಿಕೊಂಡರೂ ಸಾಧ್ಯವಿಲ್ಲ"—ಎಂದರು. ಈ ಕಾಲಜ್ಞಾನವು ಖಂಡಿತವಾಗಿಯೂ ದೃಢವಾದುದೇ. ಆದರೆ ವೃಂದಾವನನಂತಹ ಮಗನು ಈ ಮಾತನ್ನು ಕೇಳಿದ—ನಾದರೆ ಅನುತಾಪಗೊಳ್ಳದೆ ರೇಗುವನೆಂದೇ ನಮ್ಮ ನಂಬಿಕೆ.

ವೃಂದಾವನನ ವಿಯೋಗದಿಂದ ತಂದೆಯ ಮನಸ್ಸಿಗೆ ವಿಶೇಷವಾಗಿ ನೋವು ಉಂಟಾಯಿತೆಂದು ಹೇಳಲು ಸಾಧ್ಯವಿಲ್ಲ. ವೃಂದಾವನನು ಹೋದ ದ್ದರಿಂದ ಒಂದನೆಯದಾಗಿ ಖರ್ಚು ಕಡಿಮೆಯಾಯಿತು. ಎರಡನೆಯದಾಗಿ ಯಜ್ಞನಾಥನಿಗಿದ್ದ ದೊಡ್ಡ ಹೆದರಿಕೆಯೊಂದು ದೂರವಾಯಿತು. ವೃಂದಾವ

ಸನು ಎಂದೋ ವಿಷ ತಿನ್ನಿಸಿ ತನ್ನನ್ನು ಸಾಯಿಸಿಬಿಡುವನೆಂದು ಮುದುಕನು ಹೆದರುತ್ತಿದ್ದನು. ಅವನು ತಿನ್ನುತ್ತಿದ್ದ ಅತ್ಯಲ್ಪ ಆಹಾರದೊಡನೆ ವಿಷದ ಭಯವು ಅಪಾರವಾಗಿತ್ತು. ಸೊಸೆ ಸಾಯಲು ಈ ಭಯ ಸ್ವಲ್ಪ ಕಡಿಮೆಯಾಗಿತ್ತು. ಮಗನು ಹೊರಟುಹೋಗಲು ಈ ಹೆದರಿಕೆಯು ಸಂಪೂರ್ಣ ವಾಗಿ ದೂರವಾಯಿತು.

ಆದರೆ ಒಂದು ವಿಷಯ ಮಾತ್ರ ಮನಸ್ಸಿಗೆ ಸ್ವಲ್ಪ ನೋವನ್ನುಂಟು ಮಾಡಿತ್ತು. ಯಜ್ಞನಾಥನ ನಾಲ್ಕು ವರ್ಷದ ಮೊಮ್ಮಗ ಗೋಕುಲ ಚಂದ್ರ ನನ್ನು ವೃಂದಾವನನು ತನ್ನೊಡನೆ ಕರೆದುಕೊಂಡು ಹೋದನು. ಗೋಕುಲನ ಅನ್ನ ಬಟ್ಟೆಯ ಖರ್ಚು ಅತಿ ಕಡಿಮೆ. ಅವನ ಮೇಲಿನ ಪ್ರೀತಿಯಲ್ಲಿ ಯಜ್ಞ ನಾಥನಿಗೆ ಕೃತ್ರಿಮತೆಯೇನೂ ಇರಲಿಲ್ಲ. ಆದರೂ ವೃಂದಾವನನು ಅವನನ್ನು ಕರೆದುಕೊಂಡು ಹೋದಾಗ ಅಕೃತ್ರಿಮ ದುಃಖದ ನಡುವೆಯೂ ಕ್ಷಣಕಾಲ ಮನಸ್ಸಿನಲ್ಲಿ ಆಯ-ವ್ಯಯದ ಲೆಕ್ಕವು ಉದಯವಾಗಿತ್ತು. ಇಬ್ಬರೂ ಹೊರಟು ಹೋದುದರಿಂದ ತಿಂಗಳಲ್ಲಿ ಎಷ್ಟು ಹಣ ಉಳಿಯುವುದು. ವರ್ಷ ದಲ್ಲಿ ಎಷ್ಟು ಸಂಗ್ರಹವಾಗುವುದು. ಹಾಗೆ ಸೇರಿದ ಹಣಕ್ಕೆ ಎಷ್ಟು ಬಡ್ಡಿ ಬರುವುದು—ಎಂಬ ವಿಷಯ ಅವನ ಮನಸ್ಸಿನಲ್ಲಿ ಹೊಳೆಯದಿರಲಿಲ್ಲ.

ಆದರೆ ಆಗಲೂ ಗೋಕುಲ ಚಂದ್ರನ ಗದ್ದಲವಿಲ್ಲದುದರಿಂದ ಶೂನ್ಯ ಗೃಹದಲ್ಲಿ ವಾಸಿಸುವುದು ಅವನಿಗೆ ಕಠಿಣವಾಗಿತ್ತು. ಈಗ ಯಜ್ಞನಾಥನಿಗೆ ಬಾಳುವೆಯು ಕಷ್ಟವಾಗಿತ್ತು. ಪೂಜೆಯ ವೇಳೆಯಲ್ಲಿ ಯಾರೂ ತೊಂದರೆ ಮಾಡುತ್ತಿರಲಿಲ್ಲ. ತಿಂಡಿ ತಿನ್ನುವಾಗ ಕೈಯಿಂದ ಕಿತ್ತುಕೊಂಡು ತಿನ್ನುವವರು ಯಾರೂ ಇಲ್ಲ. ಲೆಕ್ಕ ಬರೆಯುವಾಗ ದೌತಿಯನ್ನು ಎತ್ತಿಕೊಂಡು ಓಡು ವುದಕ್ಕೆ ಉಪಯುಕ್ತನಾದ ಒಬ್ಬ ವ್ಯಕ್ತಿ ಮತ್ತಾರೂ ಇರಲಿಲ್ಲ. ಯಾವ ವಿಧವಾದ ಉಪದ್ರವವೂ ಇಲ್ಲದೆ ಸ್ನಾನ- ಆಹಾರಗಳನ್ನು ತೀರಿಸಿಕೊಳ್ಳುವು ದರಿಂದ ಅವನ ಮನಸ್ಸು ವ್ಯಾಕುಲಗೊಳ್ಳುತ್ತಿತ್ತು.

ಸಾಧಾರಣವಾಗಿ ಸತ್ತನಂತರವೇ ಹೀಗೆ ಉತ್ಪಾತಹೀನರಾಗಿರುವ ರೆಂದು ಅವನ ಮನಸ್ಸಿಗೆ ಅನಿಸಿತು. ವಿಶೇಷತಃ ಹಾಸಿಗೆಯ ದಿಂಬಿನಲ್ಲಿ ಮೊಮ್ಮಗನು ಮಾಡಿದ ಛಿದ್ರವನ್ನೂ, ಕೂರುವ ಮಂದಲಿಗೆಯಲ್ಲಿ ಆ ಕಲಾ

ವಿದನು ಚಿತ್ರಿಸಿದ್ದ ಮಸಿಯ ಗುರುತನ್ನೂ ಕಂಡಾಗ ಅವನ ಹೃದಯವು ಹೆಚ್ಚು ಅಶಾಂತತೆಯನ್ನು ಹೊಂದುತ್ತಿತ್ತು. ಆ ದುರುಳನು ಎರಡೇ ವರ್ಷಗಳಲ್ಲಿ ಹೊದೆಯುವ ಧೋತ್ರವನ್ನು ಉಪಯೋಗಕ್ಕೆ ಯೋಗ್ಯವಾಗದಂತೆ ಮಾಡಿದ್ದ ನೆಂದು ತಾತನಿಂದ ಬೇಕಾದಷ್ಟು ಬೈಗಳನ್ನು ಕೇಳಿದ್ದನು. ಈಗ ತನ್ನ ಶಯನಗೃಹದಲ್ಲಿ ನೂರೆಂಟು ಗಂಟುಗಳ ಆ ಪರಿತ್ಯಕ್ತಮಲಿನ ವಸ್ತ್ರವನ್ನು ಕಂಡಾಗ ಅವನ ಕಣ್ಣುಗಳಲ್ಲಿ ನೀರು ಛಲ ಛಲನೆ ಉಕ್ಕಿ ಹರಿಯತೊಡಗಿತು. ಅದನ್ನು ಬೊಂತೆ ಹೊಲೆಯಲೋ ಅಥವಾ ಮತ್ತಾವ ವಿಧವಾದ ಗೃಹಕೃತ್ಯದ ಕೆಲಸಕ್ಕೋ ಉಪಯೋಗಮಾಡದೆ ಪ್ರಯತ್ನ ಪೂರ್ವಕವಾಗಿ ಎತ್ತಿ ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟನು. ಗೋಕುಲನೇನಾದರೂ ತಿರುಗಿಬಂದರೆ ಅವನು ವರ್ಷ ಕ್ಕೊಂದು ಪಂಚೆಯನ್ನು ಹಾಳುಮಾಡಿದರೂ ಅವನನ್ನು ಖಂಡಿತ ಬೈಯುವು ದಿಲ್ಲವೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು.

ಆದರೆ ಗೋಕುಲನು ಹಿಂತಿರುಗಲಿಲ್ಲ. ಇತ್ತ ಯಜ್ಞನಾಥನ ವಯಸ್ಸು ಮೊದಲಿಗಿಂತ ಬಹು ಶೀಘ್ರವಾಗಿ ಹೆಚ್ಚುತ್ತಲಿತ್ತು. ಮನೆಯು ದಿನೇ ದಿನೇ ವಿಶೇಷವಾಗಿ ಶೂನ್ಯವಾಗಿ ಕಾಣತೊಡಗಿತು.

ಯಜ್ಞನಾಥನಿಗೆ ಮನೆಯಲ್ಲಿ ನೆಮ್ಮದಿಯಾಗಿರುವುದು ಆಗಲಿಲ್ಲ. ಮಧ್ಯಾ ಹ್ನದ ಹೊತ್ತಿನಲ್ಲ ಎಲ್ಲ ಸದ್ಗೃಹಸ್ತರೂ ಉಂಡು ನಿದ್ರಾ ಸುಖವನ್ನು ಅನು ಭವಿಸುತ್ತಿದ್ದಾಗ ಯಜ್ಞನಾಥನನ್ನು ಕೈಯಲ್ಲಿ ಹುಕ್ಕಾವನ್ನು ಹಿಡಿದುಕೊಂಡು ಕೇರಿ ಕೇರಿಯಾಗಿ ಸುತ್ತುತ್ತಿದ್ದನು. ಅವನ ಈ ನೀರವ ಮಧ್ಯಾಹ್ನ ಸಂಚಾ ರದ ವೇಳೆಯಲ್ಲಿ ಕೇರಿಯ ಹುಡುಗರು ಆಟಪಾಡುವುದನ್ನು ನಿಲ್ಲಿಸಿ ದೂರವಾಗಿ ನಿಂತುಕೊಂಡು ಅವನ ಮಿತವ್ಯಯದ ವಿಷಯದಲ್ಲಿ ಸ್ಥಳದ ಬಾಲಕ ಕವಿಗಳಿಂದ ರಚಿಸಲ್ಪಟ್ಟ ಹಲವು ಛಂದೋಬದ್ಧ ರಚನೆಗಳನ್ನು ಶ್ರುತಿಗಮ್ಯ ಉಚ್ಚ ಸ್ವರದಲ್ಲಿ ಅಂದು ಅಂದು ತೋರಿಸುತ್ತಿದ್ದರು. ಅವನ ತಂದೆಯು ಇಟ್ಟಿದ್ದ ಹೆಸರನ್ನು ಬಾಯಿಂದ ಹೇಳಿದರೆ ಅಂದು ಅನ್ನ ಸಿಕ್ಕದೆಂದು ಊರಿನ ವಯಸ್ಕರದಲ್ಲಿ ಯಾರೂ ಆ ಸಾಹಸಕ್ಕೆ ಮುಂದಾಗದೆ ಅವನನ್ನು 'ಯಜ್ಞನಾಶ' ನೆಂದು ಕರೆ ಯುತ್ತಿದ್ದರು. ಆದರೆ ಹುಡುಗರು ಮಾತ್ರ ಅವನನ್ನು ಚಾಮ್ ಚಿ-ಕೇ ಎಂದು ಕೂಗುತ್ತಿದ್ದರು. ಅದಕ್ಕೆ ಸ್ಪಷ್ಟವಾದ ಕಾರಣವನ್ನು ಕಂಡು ಹಿಡಿಯು ವುದು ಸಾಧ್ಯವಾಗಿರಲಿಲ್ಲ.

## ಎರಡನೆಯ ಪರಿಚ್ಛೇದ

ಒಂದು ದಿನ ಹೀಗೆಯೇ ಮಾವಿನ ಮರದ ಶೀತಳ ಛಾಯೆಯಲ್ಲಿದ್ದ ಹಳ್ಳಿಯ ಹಾದಿಯಲ್ಲಿ ಯಜ್ಞನಾಥನು ಮಧ್ಯಾಹ್ನ ಓಡಾಡುತ್ತಿದ್ದನು. ಒಬ್ಬ ಅಪರಿಚಿತ ಹುಡುಗನು ಹಳ್ಳಿಯ ಹುಡುಗರ ಮುಖಂಡನಾಗಿ ಅವರುಗಳಿಗೆ ಸಂಪೂರ್ಣವಾಗಿ ಹೊಸ ರೀತಿಯ ಉಪದ್ರವದ ದಾರಿಯನ್ನು ತೋರಿಸಿಕೊಡುತ್ತಿದ್ದುದನ್ನು ಕಂಡನು. ಇತರ ಹುಡುಗರೆಲ್ಲ ಅವನ ಮಾತುಗಾರಿಕೆ ಮತ್ತು ಕಲ್ಪನಾಶಕ್ತಿಯಿಂದ ಮುಗ್ಧರಾಗಿ ಅವನನ್ನು ಮುಖಂಡನಾಗಿ ಆರಿಸಲು ಸಿದ್ಧರಾದರು.

ಇತರ ಹುಡುಗರು ಯಜ್ಞನಾಥನನ್ನು ಕಂಡರೆ ಆಟ ನಿಲ್ಲಿಸುತ್ತಿದ್ದರು. ಇವನು ಹಾಗೆ ಮಾಡದೆ ಛಟ್ಟನೆ ಯಜ್ಞನಾಥನ ಹತ್ತಿರ ಬಂದು ತನ್ನ ಮೇಲುಹೊದಿಕೆಯನ್ನು ಕೊಡವಲು ಅದರೊಳಗಿನಿಂದ ಒಂದು ಓತಿಕ್ಯಾತನು ನೆಗೆದು ಕೆಳಗೆ ಬಿದ್ದು ಮೈಯನ್ನುಬ್ಬಿಸಿಕೊಂಡು ಅರಣ್ಯಾಭಿಮುಖವಾಗಿ ಓಡಿತು. ಈ ಆಕಸ್ಮಿಕ ಹಿಂಸೆಯಿಂದ ಮುದುಕನ ಮೈಯಲ್ಲಿ ಮುಳ್ಳು ಚುಚ್ಚಿದಂತಾಯಿತು. ಹುಡುಗರ ನಡುವೆ ಅತಿ ಸಂತೋಷದ ಕಲಕಲ ಧ್ವನಿ ಕೇಳಿಸುತ್ತಿತ್ತು. ಮುದುಕನು ಇನ್ನೂ ಸ್ವಲ್ಪದೂರ ಹೋದನೋ ಇಲ್ಲವೋ ಅವನ ಹೆಗಲ ಮೇಲಿದ್ದ ವಸ್ತ್ರವು ಮಾಯವಾಗಿ ಹೊಸ ಹುಡುಗನ ತಲೆಯ ಮೇಲೆ ಲಪ್ಪಟ್ಟಿಯಾಗಿ ಶೋಭಿಸುತ್ತಿತ್ತು.

ಈ ಅಜ್ಞಾತ ಬಾಲಕನಿಂದ ಈ ಪ್ರಕಾರ ಹೊಸ ರೀತಿಯ ಆದರ ಸತ್ಕಾರಗಳು ಲಭಿಸಿ ಯಜ್ಞನಾಥನಿಗೆ ಅತ್ಯಾನಂದವಾಯಿತು. ಅವನು ಬಹು ದಿನಗಳಿಂದ ಯಾವ ಹುಡುಗನಿಂದಲೂ ಅಸಂಕೋಚ ಆತ್ಮೀಯತೆಯನ್ನು ಹೊಂದಿರಲಿಲ್ಲ. ಬಲವಾಗಿ ಕೂಗಾಡಿ ಹಲವು ವಿಧದ ಆಶೆಗಳನ್ನು ತೋರಿಸಿ ಆ ಹುಡುಗನನ್ನು ಹತ್ತಿರ ಬರಮಾಡಿಕೊಂಡನು.

'ನಿನ್ನ ಹೆಸರೇನು ?' ಎಂದು ಅವನನ್ನು ಕೇಳಿದನು.

'ನಿತಾಯಿ ಪಾಲ್ !' ಎಂದು ಅವನು ಉತ್ತರಕೊಟ್ಟನು.

'ನಿಮ್ಮ ಊರು ಯಾವದು ?'

'ಹೇಳುವುದಿಲ್ಲ........!'

'ಅಪ್ಪನ ಹೆಸರೇನು ?'

'ಹೇಳುವುದಿಲ್ಲ !'

'ಯಾಕೆ ಹೇಳುವುದಿಲ್ಲ ?'

'ನಾನು ಮನೆಬಿಟ್ಟು ಓಡಿ ಬಂದಿರುವೆನು.'

'ಏಕೆ ?'

'ನಮ್ಮ ಅಪ್ಪನು ನನ್ನನ್ನು ಪಾಠಶಾಲೆಗೆ ಕಳುಹಿಸಲು ಇಚ್ಛಿಸುತ್ತಾನೆ—'

ಇಂತಹ ಹುಡುಗನನ್ನು ಪಾಠಶಾಲೆಗೆ ಕಳುಹಿಸುವುದು ಸಂಪೂರ್ಣ ನಿಷ್ಫಲವಾದ ಅಪವ್ಯಯವೆಂದೂ, ಹುಡುಗನ ಅಪ್ಪನಿಗೆ ವ್ಯವಹಾರ ಜ್ಞಾನವೇ ಇಲ್ಲವೆಂದೂ ಯಜ್ಞನಾಥನಿಗೆ ಅನಿಸಿತು.

'ನಮ್ಮ ಮನೆಯಲ್ಲಿರುವೆಯಾ ?' ಎಂದು ಯಜ್ಞನಾಥನು ಕೇಳಿದನು. ಹುಡುಗನು ಯಾವ ಕಡೆಯೂ ಇಲ್ಲದೆ ನಿಸ್ಸಂಕೋಚದಿಂದ ಅವರ ಮನೆಯಲ್ಲಿರಲು ಒಪ್ಪಿಕೊಂಡನು. ಅವನು ಆ ಮನೆಯನ್ನು ದಾರಿಯ ಪಕ್ಕದ ಮರದ ನೆರಳಿನಂತೆ ಗ್ರಹಿಸಿದನು.

ಅಷ್ಟೇ ಅಲ್ಲ. ಅನ್ನ ಬಟ್ಟೆಗಳ ವಿಷಯವಾಗಿ ಸಂಪೂರ್ಣ ಧೈರ್ಯದಿಂದ ತನ್ನ ಅಭಿಪ್ರಾಯವನ್ನು ಮುದುಕನಿಗೆ ತಿಳಿಸುತ್ತಿದ್ದನು. ಅವನ ನಡವಳಿಕೆಯು ಮುಂಚಾನೆಯೇ ಊಟ ತಿಂಡಿಗಾಗಿ ಪೂರ್ತಿಯಾಗಿ ಮುಂಗಡ ತೀರಿಸಿದ್ದವರಂತೆ ಇತ್ತು. ಊಟ ತಿಂಡಿಗಳ ವಿಷಯವಾಗಿ ಇವನಿಗೂ ಮುದುಕನಿಗೂ ಆಗಾಗ್ಗೆ ಜಗಳ ನಡೆಯುತ್ತಿತ್ತು. ತನ್ನ ಮಗನನ್ನು ಸೋಲಿಸುವುದು ಯಜ್ಞನಾಥನಿಗೆ ಸುಲಭವಾಗಿತ್ತು ಆದರೆ ಕಂಡವರ ಮಗನನ್ನು ಗೆಲ್ಲುವುದು ಅವನಿಂದ ಸಾಧ್ಯವಾಗಲಿಲ್ಲ.

## ಮೂರನೆಯ ಪರಿಚ್ಛೇದ

ಯಜ್ಞನಾಥನ ಮನೆಯಲ್ಲಿ ನಿತಾಯಿಪಾಲನಿಗೆ ನಡೆಯುವ ಈ ಅಪೂರ್ವ ಆದರ ಸತ್ಕಾರಗಳನ್ನು ಕಂಡು ಗ್ರಾಮದವರಿಗೆ ಆಶ್ಚರ್ಯವಾಯಿತು. ಮುದುಕನು ಇನ್ನು ಬಹುದಿನ ಬದುಕಿರನು. ಎಲ್ಲಿಯದೋ ಒಬ್ಬ ಪರದೇಶಿಗೆ ತನ್ನ ಆಸ್ತಿಯನ್ನೆಲ್ಲಾ ಕೊಟ್ಟು ಹೋಗುವನೆಂದು ನಿರ್ಧರಿಸಿದರು.

ಹುಡುಗನ ವಿಷಯದಲ್ಲಿ ಎಲ್ಲರಿಗೂ ಹೊಟ್ಟೇಕಿಚ್ಚು ತಲೆಹಾಕಿತು. ಅವನಿಗೆ ಹೇಗಾದರೂ ಕೆಡುಕನ್ನು ಮಾಡಬೇಕೆಂದು ಹಲವರು ಹೊಂಚು ಹಾಕುತ್ತಿದ್ದರು. ಆದರೆ ಮುದುಕನು ಅವನನ್ನು ಎದೆಯಗೂಡಿನಂತೆ ಮುಚ್ಚಿ ಕೊಂಡು ಕಾಪಾಡುತ್ತಿದ್ದನು.

ಹುಡುಗನು ಒಂದೊಂದು ಸಮಯದಲ್ಲಿ ಹೊರಟು ಹೋಗುವುದಾಗಿ ಹೇಳುತ್ತಿದ್ದನು. 'ಮಗು, ನಾನು ನಿನಗೆ ನನ್ನ ಸರ್ವಸ್ವವನ್ನೂ ಕೊಟ್ಟು ಬಿಡುವೆನು' ಎಂದು ಯಜ್ಞನಾಥನು ಅವನಿಗೆ ಆಶೆ ತೋರಿಸುತ್ತಿದ್ದನು. ಹುಡುಗನ ವಯಸ್ಸು ಅಲ್ಪ. ಆದರೂ ಈ ಮಾತಿನ ಅರ್ಥವನ್ನು ಚೆನ್ನಾಗಿ ಅರಿಯುತ್ತಿದ್ದನು.

ಗ್ರಾಮದ ಜನರು ಹುಡುಗನ ತಂದೆಯನ್ನು ಪತ್ತೆಮಾಡಲೆತ್ನಿಸಿದರು. 'ತಂದೆ ತಾಯಿಗಳ ಮನಸ್ಸಿಗೆ ಎಷ್ಟು ನೋವಾಗುತ್ತಿದೆಯೋ ಪಾಪ. ಈ ಹುಡುಗನು ಮಹಾ ಪಾಪಿಷ್ಠ—ಎಂದು ಎಲ್ಲರೂ ಹೇಳತೊಡಗಿದರು.

ಆಗಾಗ್ಯೆ ಹುಡುಗನನ್ನು ಉದ್ದೇಶಿಸಿ ಆಡಬಾರದ ಮಾತುಗಳಲ್ಲಿ ಬೈಯ್ಯು ತ್ತಿದ್ದರು. ಅವರ ಈ ಅತ್ಯಾಚಾರವನ್ನು ಕಂಡರೆ ನ್ಯಾಯಬುದ್ಧಿಗಿಂತ ಸ್ವಾರ್ಥವೇ ಹೆಚ್ಚಾಗಿರುವುದೆಂದು ಚೆನ್ನಾಗಿ ವ್ಯಕ್ತವಾಗುತ್ತಿತ್ತು.

ದಾಮೋದರಪಾಲನೆಂಬವನೊಬ್ಬನು ತಪ್ಪಿಸಿಕೊಂಡು ಹೋದ ತನ್ನ ಮಗನನ್ನು ಹುಡುಕುತ್ತಿರುವನೆಂಬ ಸುದ್ದಿಯು ದಾರಿಗನೊಬ್ಬನಿಂದ ಮುದುಕ ನಿಗೆ ತಿಳಿಯಿತು. ಅವನು ಈ ಗ್ರಾಮದ ಕಡೆಯೇ ಬರುತ್ತಿರುವನೆಂದೂ ಸುದ್ದಿ ಬಂದಿತು. ಈ ಸಮಾಚಾರದಿಂದ ನಿತಾಯಿಪಾಲನಿಗೆ ಮನಸ್ಸು ಚಂಚಲ ವಾಯಿತು. ಮುದುಕನು ತೋರಿಸಿದ ಆಶೆಗಳಿಗೆ ಮರುಳಾಗದೆ ಓಡಿಹೋಗಲು ಯತ್ನಿಸಿದನು.

ನಿನ್ನನ್ನು ನಾನು ಯಾರೂ ಕಂಡುಹಿಡಿಯಲಾರದ ಜಾಗದಲ್ಲಿ ಬಚ್ಚಿಡು ವೆನು. ಯಾರೂ ಕಂಡುಹಿಡಿಯಲಾರರು. ಈ ಊರಿನವರಿಗೂ ಸಾಧ್ಯವಿಲ್ಲ. ಎಂದು ಹೇಳಿ ಯಜ್ಞನಾಥನು ನಿತಾಯಿಯೊಡನೆ ಆಡಿಗಡಿಗೆ ''ರಾತ್ರಿಗೆ ಆ ಜಾಗವನ್ನು ತೋರಿಸುವೆನು'' ಎಂದು ಹೇಳುತ್ತಿದ್ದನು. ಕುತೂಹಲದಿಂದ ನಿತಾಯ್ ಕೇಳಿದನು. "ಎಲ್ಲಿದೆ ಆ ಜಾಗ? ತೋರಿಸು ನನಗೆ."

'ಈಗ ಹೊರಟರೆ ಎಲ್ಲರಿಗೂ ತಿಳಿಯುತ್ತೆ. ರಾತ್ರಿ ತೋರಿಸುವೆನು' ಎಂದು ಯಜ್ಞನಾಥನೆಂದನು.

ಈ ನೂತನ ರಹಸ್ಯದ ವಿಷಯವನ್ನು ಕೇಳಿ ನಿತಾಯಿಗೆ ಅತಿ ಸಂತೋಷವಾಯಿತು.—"ಅಪ್ಪನು ಹುಡುಕಲಾರದೆ ಹಿಂದಕ್ಕೆ ಹೋದನಂತರ ಹುಡುಗರೊಡನೆ ಬಾಜಿ ಕಟ್ಟಿ ಕಣ್ಣುಮುಚ್ಚಾಲೆಯಾಡುವಾಗ ಈ ರಹಸ್ಯಸ್ಥಾನದಲ್ಲಿ ಅವಿತುಕೊಂಡು ಅವರುಗಳನ್ನೆಲ್ಲಾ ಸೋಲಿಸುವೆನು—" ಎಂದುಕೊಳ್ಳುತ್ತಿದ್ದನು. ತನ್ನನ್ನು ಯಾರೂ ಕಂಡುಹಿಡಿಯಲಾರದೆ ಹೋಗುವುದೂ, ಅಪ್ಪನೂ ಪತ್ತೆಮಾಡಲಾರದೆ ಹಿಂತಿರುಗುವುದೂ ಇವೆಲ್ಲ ಬಹು ಸೋಜಿಗದ ಸಂಗತಿಯೆಂದು ಅವನು ಮನಸ್ಸಿನಲ್ಲೇ ಆನಂದದಿಂದ ಉಬ್ಬುತ್ತಿದ್ದನು.

ಮಧ್ಯಾಹ್ನ ಮುದುಕನು ಆ ಹುಡುಗನನ್ನು ಒಂದು ಕೊಠಡಿಯಲ್ಲಿ ಕೂಡಿ ಬೀಗಹಾಕಿ ಎಲ್ಲಿಯೋ ಹೊರಟುಹೋಗಿದ್ದನು. ಹಿಂತಿರುಗಿದಾಗ ಹುಡುಗನು ಅವನನ್ನು ಮತ್ತೆ ಮತ್ತೆ ಪ್ರಶ್ನಿಸಿ ಸಾಕುಮಾಡಿದನು. ಸಂಜೆಯಾಯಿತೋ ಇಲ್ಲವೋ ಹುಡುಗನು ಮುದುಕನನ್ನು ಹೊರಡಿಸಲೆತ್ನಿಸಿದನು.

'ಇನ್ನೂ ರಾತ್ರಿಯಾಗಲಿಲ್ಲ' ಎಂದು ಯಜ್ಞನಾಥನೆಂದನು.

'ರಾತ್ರಿಯಾಯಿತು ತಾತ.'

'ಇನ್ನೂ ಕೇರಿಯ ಜನರು ನಿದ್ದೆಮಾಡಿಲ್ಲ.'

ನಿತಾಯಿಯು ಕ್ಷಣಹೊತ್ತು ಸುಮ್ಮನಿದ್ದು—'ಎಲ್ಲರೂ ನಿದ್ದೆಮಾಡಿರುವರು. ಇನ್ನು ಹೊರಡು ತಾತ–ಎಂದನು.

ರಾತ್ರಿ ಹೊತ್ತು ಕಳೆಯುತ್ತ ಬಂದಿತು. ನಿದ್ರಾತುರನಾದ ನಿತಾಯಿಪಾಲನು ಬಹು ಕಷ್ಟಪಟ್ಟು ನಿದ್ರೆಯನ್ನು ತಡೆಯಲು ಯತ್ನಿಸುತ್ತಿದ್ದರೂ ಆಗಾಗ್ಗೆ ಕುಳಿತೆಡೆಯಲ್ಲೇ ತೂಕಡಿಸಿ ಬೀಳುತ್ತಿದ್ದನು. ರಾತ್ರಿ ಎರಡು ಝಾವ ಕಳೆದನಂತರ ಯಜ್ಞನಾಥನು ನಿತಾಯಿಯ ಕೈಯನ್ನು ಹಿಡಿದುಕೊಂಡು ನಿದ್ರಿತ ಗ್ರಾಮದ ಅಂಧಕಾರ ಪಥದಲ್ಲಿ ಹೊರಬಿದ್ದನು. ಮತ್ತಾವ ಶಬ್ದವೂ ಇರಲಿಲ್ಲ. ಕೇವಲ ನಾಯಿಗಳು ಆಗಾಗ್ಗೆ ಮಾಡುತ್ತಿದ್ದ ಭೌವ್, ಭೌವ್ ಶಬ್ದ ಮಾತ್ರ ಕೇಳುತ್ತಿತ್ತು. ಆ ಶಬ್ದದಿಂದ ಹತ್ತಿರದಲ್ಲೂ ದೂರದಲ್ಲೂ ಇದ್ದ ನಾಯಿಗಳೆಲ್ಲ ತಾರಸ್ವರದಿಂದ ಮೇಳಕೊಡಿಸುತ್ತಿದ್ದುವು. ನಡು ನಡುವೆ

ನಿಶಾಚರಪಕ್ಷಿಗಳು ಹೆಜ್ಜೆಯ ಶಬ್ದದಿಂದ ಎಚ್ಚೆತ್ತು ಬೆಚ್ಚಿಬಿದ್ದು ಛಟಪಟನೆ ರೆಕ್ಕೆಬಡಿಯುತ್ತಾ ಕಾಡಿನೊಳಕ್ಕೆ ಹಾರಿಹೋಗುತ್ತಿದ್ದುವು. ನಿತಾಯಿಯು ಹೆದರಿಕೆಯಿಂದ ಯಜ್ಞನಾಥನ ಕೈಯನ್ನು ಬಲವಾಗಿ ಹಿಡಿದುಕೊಂಡನು.

ಬಹು ದೂರ ನಡೆದು ಕೊನೆಗೆ ಕಾಡಿನ ಮಧ್ಯದ ಒಂದು ಪಾಳು ಗುಡಿಯ ಇದಿರಿದಲ್ಲಿ ಇಬ್ಬರೂ ಬಂದು ನಿಂತರು. ನಿತಾಯ್ ಸ್ವಲ್ಪ ಕ್ಷೀಣ ಸ್ವರದಿಂದ 'ಇಲ್ಲೀಯೇನು?' ಎಂದನು.

ಅವನು ಮನಸ್ಸಿನಲ್ಲಿ ಹೇಗೆ ಎಣಿಸಿದ್ದನೋ ಹಾಗೆ ಇರಲಿಲ್ಲ. ಇದರಲ್ಲಿ ಅಂತಹ ರಹಸ್ಯವೇನೂ ಕಾಣಲಿಲ್ಲ. ಅಪ್ಪನ ಮನೆಯನ್ನು ಬಿಟ್ಟು ಹೊರಟ ನಂತರ ಅವನು ಹಲವು ಬಾರಿ ಇಂತಹ ಪಾಳುಗುಡಿಗಳಲ್ಲಿ ರಾತ್ರಿಯನ್ನು ಕಳೆದಿದ್ದನು. ಸ್ಥಳವು ಕಣ್ಣುಮುಚ್ಚಾಲೆಯಾಡಲು ಅನುಕೂಲವಾದದ್ದೇ. ಆದರೆ ಈ ಸ್ಥಳದಲ್ಲಿ ಅವಿತುಕೊಂಡವನನ್ನು ಹಿಡಿಯುವುದು ಅಸಂಭವವಲ್ಲ.

ದೇವಸ್ಥಾನದ ಒಳಗೆ ಹೋಗಿ ಯಜ್ಞನಾಥನು ಒಲ್ಲೊಂದು ಕಡೆ ನೆಲಕ್ಕೆ ಹಾಸಿದ್ದ ಕಲ್ಲನ್ನು ಎತ್ತಿಟ್ಟನು. ಹುಡುಗನು ಇಣಿಕಿನೋಡಿದನು. ಕೆಳಗೊಂದು ನೆಲಮಾಳಿಗೆಯಿತ್ತು. ಅಲ್ಲಿ ಒಂದು ದೀಪ ಉರಿಯುತ್ತಿತ್ತು. ಅದನ್ನು ಕಂಡು ಹುಡುಗನಿಗೆ ಅತಿ ವಿಸ್ಮಯವೂ ಕುತೂಹಲವೂ ಉಂಟಾಯಿತು. ಏಣಿಯೊಂದನ್ನು ಇಟ್ಟುಕೊಂಡು ಯಜ್ಞನಾಥನು ಕೆಳಗೆ ಇಳಿದು ಹೋದನು. ನಿತಾಯಿಯೂ ಹೆದರುತ್ತ ಹೆದರುತ್ತ ಅವನ ಹಿಂದೆಯೇ ಇಳಿದನು.

ಕೆಳಗೆ ಇಳಿಯಲು ನಾಲ್ಕೂ ಕಡೆ ಹಿತ್ತಾಳೆಯ ಬಿಂದಿಗೆಗಳನ್ನು ಸಾಲಾಗಿ ಇಟ್ಟಿದ್ದುದು ಕಾಣಿಸಿತು. ಕೊಠಡಿಯ ನಡುವೆ ಒಂದು ಪೀಠವಿತ್ತು. ಅದರ ಇದಿರಿನಲ್ಲಿ ಗಂಧ, ಕುಂಕುಮ, ಹೂಮಾಲೆ ಮತ್ತು ಪೂಜೆಯ ಸಾಮಗ್ರಿಗಳಿದ್ದುವು. ಬಾಲಕನು ಕುತೂಹಲದೊಡನೆ ಮುಂದುವರಿದು ಕೊಡಗಳನ್ನು ಪರೀಕ್ಷಿಸಲು ಅವುಗಳಲ್ಲೆಲ್ಲಾ ರೂಪಾಯಿ ಮತ್ತು ಚಿನ್ನದ ಮೊಹರುಗಳು ತುಂಬಿದ್ದವು.

"ನಿತಾಯಿ! ನನ್ನ ಹಣವನ್ನೆಲ್ಲಾ ನಿನಗೆ ಕೊಡುವೆನೆಂದು ನಾನು ಹೇಳಿರಲಿಲ್ಲವೇ. ನನ್ನಲ್ಲಿ ಅಷ್ಟೇನೂ ಹೆಚ್ಚಾಗಿಲ್ಲ. ಇದೋ ಈ ಕೆಲವು ಕೊಡಗಳು ಮಾತ್ರವೇ ನನ್ನದಾಗಿ ಇವೆ. ಇಂದು ಇವೆಲ್ಲವನ್ನೂ ನಿನಗೆ ಕೊಡುವೆನು" ಎಂದು ಮುದುಕನು ಹೇಳಿದನು.

ಹುಡುಗನು ಹೌಹಾರಿ–'ಎಲ್ಲಾನೂ ನನಗೇಯೆನು? ಇದರಲ್ಲಿ ಒಂದು ರೂಪಾಯನ್ನೂ ನೀನು ತೆಗೆದುಕೊಳ್ಳುವುದಿಲ್ಲವೋ!' ಎಂದನು.

ಹಾಗೇನಾದರೂ ತೆಗೆದುಕೊಂಡರೆ ನನ್ನ ಕೈಗೆ ಕುಷ್ಟರೋಗ ಬರಲಿ ಆದರೆ ಒಂದು ಸಂಗತಿ. ನನ್ನ ಮೊಮ್ಮಗ ಗೋಕುಲಚಂದ್ರನಾಗಲೀ ಅವನ ಮಗ ಅಥವಾ ಮೊಮ್ಮಗ ಅಥವಾ ಅವನ ವಂಶದವರು ಯಾರಾದರೂ ಆಗಲಿ ಬಂದದ್ದಾದರೆ ಅವರುಗಳ ಕೈಗೆ ಈ ಹಣವನ್ನೆಲ್ಲಾ ಎಣಿಸಿಕೊಡಬೇಕು–' ಎಂದನು.

ಯಜ್ಞನಾಥನಿಗೆ ಹುಚ್ಚು ಹಿಡಿದಿದೆಯೆಂದು ಹುಡುಗ ನಿಶ್ಚಯಿಸಿದನು. 'ಹಾಗೆಯೇ ಆಗಲಿ' ಎಂದು ತಕ್ಷಣ ಒಪ್ಪಿಕೊಂಡನು.

'ಹಾಗಾದರೆ ಈ ಆಸನದಲ್ಲಿ ಕುಳಿತಿಕೋ.'

'ಏಕೆ?'

'ನಿನಗೆ ಪೂಜೆಮಾಡಬೇಕು.'

'ಏಕೆ?'

'ಹಾಗೆಯೇ ಪದ್ಧತಿ'.

ಹುಡುಗನು ಪೀಠದಮೇಲೆ ಕುಳಿತನು ಯಜ್ಞನಾಥನು ಅವನ ಹಣೆಗೆ ಗಂಧ ಹಚ್ಚಿ, ಕುಂಕುಮದ ಬೊಟ್ಟನ್ನಿಟ್ಟು ಕೊರಳಲ್ಲಿ ಮಾಲೆಹಾಕಿ ಇದಿರಿನಲ್ಲಿ ಕುಳಿತು ಪಟಪಟನೆ ಮಂತ್ರವನ್ನುಚ್ಚರಿಸತೊಡಗಿದನು.

ದೇವತೆಯ ಸ್ಥಾನವನ್ನು ಆಕ್ರಮಿಸಿ ಮಂತ್ರವನ್ನು ಆಲಿಸುವುದರಲ್ಲಿ ನಿತಾಯಿಗೆ ಹೆದರಿಕೆಯಾಯಿತು. 'ತಾತಾ' ಎಂದು ಕೂಗಿದನು.

ಯಜ್ಞನಾಥನು ಉತ್ತರ ಕೊಡದೆ ಮಂತ್ರಗಳನ್ನು ಉಚ್ಚರಿಸುತ್ತಿದ್ದನು.

ಕೊನೆಗೆ ಬಹು ಕಷ್ಟದಿಂದ ಒಂದೊಂದು ಬಿಂದಿಗೆಯನ್ನೂ ಹುಡುಗನ ಇದಿರಿಗೆ ತಳ್ಳಿ ತಂದು ಅವನಿಗೆ ದಾನಮಾಡಿದನು; ಮತ್ತು ಪ್ರತಿಸಲವೂ ಅವನಿಂದ ಹೀಗೆ ಪ್ರತಿಜ್ಞೆಮಾಡಿಸಿದನು. "ಯುಧಿಷ್ಟಿರ ಕುಂಡುವಿನ ಪುತ್ರ ಗಧಾಧರಕುಂಡ; ಅವನ ಪುತ್ರ ಪ್ರಾಣಕೃಷ್ಣಕುಂಡ; ಅವನ ಪುತ್ರ ಪರಮಾನಂದ ಕುಂಡ; ಅವನ ಪುತ್ರಯಜ್ಞನಾಥ ಕುಂಡ, ಅವನ ಮಗ ವೃಂದಾವನ ಕುಂಡನ

ಮಗ ಗೋಕುಲ ಚಂದ್ರಕುಂಡ ಅಥವಾ ಅವನ ಮಕ್ಕಳು ಮೊಮ್ಮಕ್ಕಳಲ್ಲಿ ಯಾರಾದರೂ ಆಗಲಿ ಅಥವಾ ಅವರ ವಂಶದವರ ನ್ಯಾಯವಾದ ಉತ್ತರಾಧಿಕಾರಿಗಳು ಯಾರೇ ಆಗಲಿ ಬಂದರೆ ಈ ಹಣವನ್ನೆಲ್ಲಾ ಎಣಿಸಿಕೊಡುವೆನು".

ಈ ರೀತಿ ಬಾರಿ ಬಾರಿಗೆ ಹೇಳುತ್ತ ಹುಡುಗನು ಬುದ್ಧಿಗೆಟ್ಟವನಂತಾದನು. ಕ್ರಮೇಣ ಅವನ ನಾಲಿಗೆಯು ತೊದಲತೊಡಗಿತು. ಪೂಜಾನುಷ್ಠಾನವೆಲ್ಲಾ ಪೂರ್ತಿಯಾಗುವ ವೇಳೆಗೆ ದೀಪ ಧೂಪಗಳ ಹೊಗೆ ಮತ್ತು ಅವರಿಬ್ಬರ ನಿಶ್ವಾಸದಿಂದ ಆ ಸಣ್ಣ ಗವಿಯಲ್ಲಿ ಉಸಿರುಬಿಡುವುದಕ್ಕೆ ಕಷ್ಟವಾಗತೊಡಗಿತು. ಹುಡುಗನ ಗಂಟಲೊಣಗಿತು. ಕೈಕಾಲುಗಳು ಉರಿಯತೊಡಗಿದುವು. ಉಸಿರು ಕಟ್ಟಿಕೊಳ್ಳಲಾರಂಭಿಸಿತು.

ದೀಪವು ಮಂಕಾಗಿ ಅಕಸ್ಮಾತ್ತಾಗಿ ಆರಿಹೋಯಿತು. ಕತ್ತಲೆಯಲ್ಲಿ ಯಜ್ಞನಾಥನು ಏಣಿ ಹತ್ತಿ ಮೇಲೆ ಹೋಗುತ್ತಿದ್ದ ವಿಷಯ ಹುಡುಗನಿಗೆ ತಿಳಿಯಿತು.

ಹುಡುಗನು ವ್ಯಾಕುಲಗೊಂಡು ತಾತ ಎಲ್ಲಿಗೆ ಹೊರಟೆ ಎಂದನು.

ಯಜ್ಞನಾಥನು 'ನಾನು ಹೊರಟೆ ನೀನು ಇಲ್ಲಿಯೇ ಇರು ನಿನ್ನನ್ನು ಯಾರೂ ಹುಡುಕಿ ಕಂಡುಹಿಡಿಯಲಾರರು. ಆದರೆ ನೆನಪಿರಲಿ.—ಯಜ್ಞನಾಥನ ಮೊಮ್ಮಗ ವೃಂದಾವನನ ಮಗ ಗೋಕುಲ ಚಂದ್ರ ಎಂದು ಹೇಳುತ್ತಾ ಮೇಲಕ್ಕೆ ಹತ್ತಿ ಏಣಿಯನ್ನು ಮೇಲಕ್ಕೆ ಎಳೆದುಕೊಂಡನು. ಬಾಲಕನು ರುದ್ಧಶ್ವಾಸ ಕಂಠದೊಡನೆ ಬಹು ಕಷ್ಟದಿಂದ—'ತಾತಾ—ನಾನು ಅಪ್ಪನ ಹತ್ತಿರಕ್ಕೇ ಹೋಗುವೆನು.' ಎಂದನು ಯಜ್ಞನಾಥನು ರಂಧ್ರದ ಬಾಗಿಲಿಗೆ ಕಲ್ಲನ್ನೆಳೆದನು. ಕಿವಿಗೊಟ್ಟು ಕೇಳಲು ನಿತಾಯಿಯು ಒಂದು ಸಲ ರುದ್ಧ ಕಂಠದಿಂದ—'ಅಪ್ಪಾ' ಎಂದುದು ಕೇಳಿಸಿತು. ಅನಂತರ ಹುಡುಗನು ಕೆಳಗೆ ಬಿದ್ದ ಶಬ್ದವಾಯಿತು. ಆಮೇಲೆ ಯಾವ ಶಬ್ದವೂ ಕೇಳಿಸಲಿಲ್ಲ.

ಯಜ್ಞನಾಥನು ಹೀಗೆ ತನ್ನ ಸಂಪತ್ತನ್ನೆಲ್ಲಾ 'ಯಕ್ಷ'ನ ಕೈಯಲ್ಲಿ ಸಮರ್ಪಣೆ ಮಾಡಿದ ನಂತರ ರಂಧ್ರಕ್ಕೆ ಮುಚ್ಚಿದ್ದ ಕಲ್ಲಿನ ಮೇಲೆ ಮಣ್ಣನ್ನು ಎಳೆಯ ತೊಡಗಿದನು. ಅದರ ಮೇಲೆ ಪಾಳು ಗುಡಿಯ ಇಟ್ಟಿಗೆ—ಮಣ್ಣುಗಳನ್ನು ತಂದು ರಾಶಿಯೊಟ್ಟಿದನು. ಬಹುದೂರ ಭೂಗರ್ಭದಿಂದ ಅಳುವ

ಧ್ವನಿ ಕೇಳಿಸುತ್ತಿತ್ತು. ರಾತ್ರಿಯ ಆಕಾಶವು ಆ ಧ್ವನಿಯಿಂದ ತುಂಬಿ ದಂತೆ ಅವನಿಗೆ ತೋರುತ್ತಿತ್ತು. ಪೃಥ್ವಿಯ ಎಲ್ಲ ಜನರೂ ಆ ಶಬ್ದದಿಂದ ಎಚ್ಚಿತ್ತು ಹಾಸಿಗೆಯ ಮೇಲೆ ಕುಳಿತು ಕಿವಿಗೊಟ್ಟು ಕೇಳುತ್ತ ಕುಳಿತಿರುವಂತೆ ಅವನಿಗೆ ಕೇಳಿಸಿತು.

ಮುದುಕನು ಬಿದರಿ ಮಣ್ಣಿನ ರಾಶಿಯನ್ನು ಬೆಳಸುತ್ತಿದ್ದನು. ಯಾರೋ—'ಅಪ್ಪಾ' ಎಂದು ಕೂಗಿದ ಹಾಗಾಯಿತು. ಮುದುಕನು ನೆಲ ವನ್ನು ಬಡಿಯುತ್ತ ಸುಮ್ಮನಿರು—ಎಲ್ಲರಿಗೂ ಕೇಳಿಸುವುದು—ಎಂದನು.

ಮತ್ತೆ 'ಅಪ್ಪಾ' ಎಂಬ ಕೂಗು ಕೇಳಿಸಿತು.

ಹೊರಗೆ ಬಿಸಿಲು ಏರಿತ್ತು. ಮುದುಕನು ಹೆದರಿಕೆಯೊಡನೆ ದೇವಸ್ಥಾನ ವನ್ನು ಬಿಟ್ಟು ಹೊರಕ್ಕೆ ಬಂದನು.

ಅಲ್ಲಿಯೂ ಯಾರೋ 'ಅಪ್ಪಾ' ಎಂದು ಕೂಗಿದ ಹಾಗಾಯಿತು. ಯಜ್ಞನಾಥನು ಬೆಚ್ಚಿಬಿದ್ದು ಹಿಂತಿರುಗಿ ನೋಡಿದನು. ಅವನ ಮಗ ವೃಂದಾವನನು ಅಲ್ಲಿ ನಿಂತಿದ್ದನು.

"ಅಪ್ಪಾ—ನನ್ನ ಮಗ ನಿನ್ನ ಬಳಿ ಇರುವನೆಂದು ತಿಳಿಯಿತು—ಅವ ನೆಲ್ಲಿ ?" ಎಂದು ವೃಂದಾವನನು ಕೇಳಿದನು.

ಮುದುಕನು ಕಣ್ಣು ಮುಖಗಳನ್ನು ವಿಕಾರವಾಗಿ ಮಾಡಿಕೊಂಡು— ವೃಂದಾವನನ ಕಡೆ ಬೊಗ್ಗಿ—'ನಿನ್ನ ಮಗನೇ' ಎಂದನು.

"ಹೌದು—ಗೋಕುಲ—ಈಗ ಅವನ ಹೆಸರು ನಿತಾಯಿ ಪಾಲಿ" ಎಂದು—ನನ್ನ ಹೆಸರು ದಾಮೋದರ ಪಾಲ್ ಎಂದು ಸುತ್ತ ಮುತ್ತ ಬಹು ದೂರದವರೆಗೆ ನಿನ್ನ ಖ್ಯಾತಿಯು ಹರಡಿದೆ. ಆದ್ದರಿಂದಲೇ ನಾವುಗಳು ನಾವುಗಳು ಲಜ್ಜೆಯಿಂದ ಹೆಸರನ್ನು ಬದಲಾಯಿಸಿಕೊಂಡಿರುವೆವು. ಇಲ್ಲ ವಾದರೆ ಯಾರೂ ನಮ್ಮ ಹೆಸರು ಉಚ್ಚರಿಸರು—" ಎಂದು ವೃಂದಾವನನು ಹೇಳಿದನು.

ವೃದ್ಧನು ಹತ್ತು ಬೆರಳನ್ನೂ ನೀಡಿ ಆಕಾಶವನ್ನು ತಡವರಿಸುತ್ತಾ ಗಾಳಿಯನ್ನು ಹಿಡಿದುಕೊಳ್ಳುವನಂತೆ ಯತ್ನಿಸಿ ಭೂಮಿಯ ಮೇಲೆ ಬಿದ್ದನು.

ಪ್ರಜ್ಞೆ ತಿಳಿದಾಗ ಯಜ್ಞನಾಥನು ವೃಂದಾವನನನ್ನು ಗುಡಿಯೊಳಕ್ಕೆ

ಎಳೆದುಕೊಂಡು ಹೋದನು—ಅಳುವ ಧ್ವನಿಯೇನಾದರು ಕೇಳುವುದೋ' ಎಂದನು.

ವೃಂದಾವನನು 'ಇಲ್ಲ' ಎಂದನು.

ಕಿವಿಗೊಟ್ಟು ಕೇಳು ನೋಡೋಣ 'ಅಪ್ಪಾ' ಎಂದು ಯಾರಾದರೂ ಕೂಗುತ್ತಿರುವರೋ. ವೃಂದಾವನನು ಪುನಃ 'ಇಲ್ಲ'ವೆಂದನು. ಮುದುಕನು ಆಗ ನೆಮ್ಮದಿಯಾದವನಾದನು. ಅಲ್ಲಿಂದ ಮುಂದೆ ಮುದುಕನು ಯಾರನ್ನು ಕಂಡರೂ "ಅಳುವ ಧ್ವನಿ ಕೇಳಿಸುವುದೇನು?" ಎಂದು ಪ್ರಶ್ನಿಸುತ್ತಿದ್ದನು. ಇವನ ಈ ಹುಚ್ಚು ಮಾತುಗಳನ್ನು ಕೇಳಿ ಎಲ್ಲರೂ ನಗುತ್ತಿದ್ದರು.

ನಾಲ್ಕಾರು ವರ್ಷಗಳು ಕಳೆಯಲು ಮುದುಕನ ಮರಣಕಾಲವೊದಗಿತು. ಕಣ್ಣಿನ ಮೇಲಿನಿಂದ ಪ್ರಪಂಚದ ಬೆಳಕು ಮರೆಯಾಗತೊಡಗಲು, ಶ್ವಾಶ ಅಡಗತೊಡಗಿದಾಗ ಮುದುಕನು ಖಾಯಿಲೆಯ ಪ್ರಬಲತೆಯಿಂದ ಎದ್ದು ಕುಳಿತನು. ಒಮ್ಮೆ ಎರಡು ಕೈಗಳಿಂದ ನಾಲ್ಕಾಕಡೆ ತಡವರಿಸುತ್ತ 'ನಿತಾಯಿ' ನನ್ನ ಏಣಿಯನ್ನು ಯಾರು ಎತ್ತಿಕೊಂಡು ಹೋದರು ಎಂದನು.

ವಾಯು ಹೀನ, ಪ್ರಕಾಶ ಹೀನವಾದ ಆ ಮಹಾ ಗಹ್ವರದಿಂದ ಮೇಲಕ್ಕೇರಲು ಏಣಿಯನ್ನು ಕಾಣಲಾರದೆ ಅವನು ಮತ್ತೆ ಧೊಪ್ಪನೆ ಹಾಸಿಗೆಯ ಮೇಲೆ ಬಿದ್ದನು. ಪ್ರಪಂಚದ ಕಣ್ಣು ಮುಚ್ಚಾಲೆಯಾಟದಲ್ಲಿ ಹುಡುಕಿದರೆ ಯಾರಿಗೂ ಸಿಕ್ಕಲಾರದಂಥಾ ಸ್ಥಳಕ್ಕೆ ಅಂತರ್ಹಿತನಾದನು.



## ವಿಚಾರಕ

ನಾನಾ ಬದಲಾವಣೆಗಳ ನಂತರ ಕೊನೆಯಲ್ಲಿ ಗತಯೌವನೆ ಸ್ತ್ರೀರೋದಿಯು ಯಾವ ಪುರುಷನನ್ನು ಆಶ್ರಯಿಸಿದ್ದಳೋ ಅವನೂ ಸಹ ಅವಳನ್ನು ಜೀರ್ಣ ವಸ್ತ್ರದಂತೆ ಪರಿತ್ಯಾಗಮಾಡಿ ಹೊರಟು ಹೋದಾಗ ಹಿಡಿಗೂಳಿಗಾಗಿ ಮತ್ತೊಂದು ಆಶ್ರಯ ಹುಡುಕುವುದು ಅವಳಿಗೆ ಅಸಹ್ಯವಾಯಿತು.

ಯೌವನದ ಕೊನೆಯಲ್ಲಿ ಶುಭ್ರ ಶರತ್ ಕಾಲದಂತಹ ಒಂದು ಗಭೀರ ಪ್ರಶಾಂತ ಪ್ರಗಾಢ ಸುಂದರ ವಯಸ್ಸು ಬರುವುದು. ಆಗ ಬಾಳಿನ ಫಲವು ಮಾಗುವ ಮತ್ತು ಸಸ್ಯವು ಬಲಿಯುವ ಕಾಲ. ಆ ಕಾಲದಲ್ಲಿ ಮತ್ತೆ ಉದ್ದಾಮ ಯೌವನದ ವಸಂತ ಚಂಚಲಕೆ ಶೋಭಿಸದು. ಅಷ್ಟರಲ್ಲಿ ಪ್ರಪಂಚದ ನಡುವೆ ಆಮೋದದ ಮನೆಯನ್ನು ಕಟ್ಟುವುದೂ ಒಂದು ವಿಧವಾಗಿ ಕೊನೆಗಂಡಿರುವುದು. ಒಳ್ಳೆಯದು ಕೆಟ್ಟದ್ದು ಮತ್ತು ನಾನಾ ಸುಖ ದುಃಖಗಳಿಂದ ಕೂಡಿದ ಬಾಳಿನ ನಡುವೆ ಅನುಭವವು ಅಂತರ್ಯಾದ ಮಾನವನನ್ನು ಪಕ್ವಗೊಳಿಸಿರುವುದು. ನಮ್ಮ ಎಲ್ಲೆಯನ್ನು ಮೀರಿರುವ ರಾಕ್ಷಸೀ ಅತ್ಯಾಶೆಯ ಕಲ್ಪನಾ ಲೋಕದಿಂದ ಎಲ್ಲ ಉದ್‌ಭ್ರಾಂತ ವಾಸನೆಗಳನ್ನೂ ಎಳೆದಿಟ್ಟು ತನ್ನ ಕ್ಷುದ್ರ ಶಕ್ತಿಯ ಮನೆಯ ಆವರಣದಲ್ಲಿ ನೆಲಸಿಡುವುದು. ಆಗ ನೂತನ ಪ್ರಣಯದ ಮುಗ್ಧ ದೃಷ್ಟಿಯು ಪುನಃ ಆಕರ್ಷಿಸಲಾರದು. ಆದರೆ ಹಳಬರ ಬಳಿಯಲ್ಲಿ ಮನುಷ್ಯನು ಇನ್ನೂ ಪ್ರೀತಿ ಪಾತ್ರನಾಗುವನು. ಆಗ ಯೌವನದ ಲಾವಣ್ಯವು ಸ್ವಲ್ಪ ಸ್ವಲ್ಪವಾಗಿ ವಿಶೀರ್ಣವಾಗ ತೊಡಗಿರುವುದು. ಆದರೆ ಮುಪ್ಪಿಲ್ಲದ ಅಂತರ್ಯದ ಪ್ರಕೃತಿಯು ಬಹುಕಾಲ ಸಹವಾಸದ ಫಲವಾಗಿ ಕಣ್ಣು ಮುಖಗಳಲ್ಲಿ ಸ್ಫುಟವಾಗಿ ಚಿತ್ರಿತವಾಗುವುದು. ನಗುವೂ, ದೃಷ್ಟಿಯೂ, ಕಂಠಸ್ವರವೂ ಒಳಗಿನ ಮನುಷ್ಯನ ಮೂಲಕ ಓತ ಪ್ರೋತವಾಗುವುದು. ಯಾವುದನ್ನು ಸ್ವಲ್ಪವೂ ಅನುಭವಿಸಲಿಲ್ಲವೋ ಆದರ ಆಶೆ ತೊರೆದು, ಯಾರು ಬಿಟ್ಟು ಹೋಗಿರುವರೊ ಅವರಿಗೋಸ್ಕರ ದುಃಖವನ್ನು ಮುಗಿಸಿ, ಯಾರು ವಂಚಿಸಿರುವರೋ ಅವರನ್ನು ಕ್ಷಮಿಸಿ ಯಾರು ಹತ್ತಿರ ಬಂದಿರುವರೋ,

ಬಾಳುವೆಯ ದೊಡ್ಡ ಜಂಝಾ ಮಾತುಗಳಿಂದ ಶೋಕ—ತಾಪ—ವಿಚ್ಛೇದ ಗಳ ನಡುವೆ ಉಳಿದಿರುವರೋ ಅವರುಗಳನ್ನು ಎದೆಗೆ ಅಪ್ಪಿಕೊಂಡು ಖುನಿಶ್ಚಿತ, ಸುಪರಿಕ್ಷಿತಚಿರ—ಪರಿಚಿತ ಜನರ ಪ್ರೀತಿಯ ಆವರಣದ ನಡುವೆ ನಿರಾಪದವಾದ ನೆರಳನ್ನು ರಚಿಸಿಕೊಂಡು ಅವರ ನಡುವೆಯೇ ಎಲ್ಲ ಶ್ರಮದ ಕೊನೆ ಮತ್ತು ಎಲ್ಲ ಆಶಯಗಳ ತೃಪ್ತಿಯನ್ನು ಹೊಂದಬಹುದು. ಯೌವನದ ಆ ಸ್ನಿಗ್ಧ ಸಂಜೆ ಹೊತ್ತಿನಲ್ಲಿ ಬಾಳುವೆಯ ಶಾಂತಿ ಪರ್ವವನ್ನೂ ಯಾರು ಹೊಸದಾಗಿ ಶೇಖರಿಸಬೇಕಾಗುವುದೊ, ಹೊಸ ಪರಿಚಯ ಹೊಸ ಬಂಧನದ ವ್ಯರ್ಥ ನಂಬಿಕೆಯಿಂದ ಹೊಸ ಪ್ರಯತ್ನದಲ್ಲಿ ಓಡ ಬೇಕಾಗುವುದೋ, ಆಗಲೂ ಯಾರಿಗೆ ವಿಶ್ರಮಿಸಿಕೊಳ್ಳಲು ಹಾಸಿಗೆಯು ಇನ್ನೂ ರಚಿತವಾಗಿರುವುದಿಲ್ಲವೋ, ಯಾರಿಗೆ ಮನೆಗೆ ಹಿಂದಿರುಗುವುದಕ್ಕಾಗಿ ಸಂಜೆ ದೀವಿಗೆಯು ಇನ್ನೂ ಹಚ್ಚಲ್ಪ ಟ್ಟಿರುವುದಿಲ್ಲವೋ ಪ್ರಪಂಚದಲ್ಲಿ ಆತನಂತಹ ಶೋಚನೀಯ ವ್ಯಕ್ತಿಯು ಮತ್ತಾರೂ ಇಲ್ಲ.

ಕ್ಷಿರೋದೆಯು ತನ್ನ ಯೌವನದ ಅಂತ್ಯದಲ್ಲಿ ಬೆಳಗ್ಗೆ ಎಚ್ಚೆತ್ತು ನೋಡಿ ತನ್ನ ಪ್ರಣಯಿಯು ಹಿಂದಿನ ರಾತ್ರಿ ತನ್ನ ಎಲ್ಲ ಒಡವೆಗಳನ್ನೂ ಹಣ ವನ್ನೂ ಅಪಹರಿಸಿಕೊಂಡು ಓಡಿ ಹೋಗಿರುವುದನ್ನು ಅರಿತಳು—ಮನೆಯ ಬಾಡಿಗೆ ಕೊಡುವುದಕ್ಕೂ ಹಣವಿರಲಿಲ್ಲ—ಮೂರು ವರ್ಷದ ಮುದ್ದು ಮಗನಿಗೆ ಹಾಲು ತಂದು ಕುಡಿಸಲೂ ಕಾಸಿಲ್ಲ—ತನ್ನ ಬಾಳುವೆಯ ಮುವ್ವತ್ತೆಂಟು ವರ್ಷ ಗಳಲ್ಲಿ ಅವಳು ಒಂದೇ ಒಂದು ವ್ಯಕ್ತಿಯನ್ನಾದರೂ ತನ್ನವನನ್ನಾಗಿ ಮಾಡಿ ಕೊಳ್ಳಲಾರದೆ ಹೋಗಿರುವುದನ್ನು, ಒಂದೇ ಮನೆಯಲ್ಲಿ ಬದುಕಿ ಸಾಯುವ ಹಕ್ಕನ್ನು ಸಂಪಾದಿಸಿಕೊಳ್ಳಲಾರದೆ ಹೋದಳೆಂಬುದನ್ನು ಅವಳು ಯೋಚಿಸಿ ಕಣ್ಣೀರನ್ನು ಒರಸಿಕೊಂಡು ಎರಡು ಕಣ್ಣುಗಳಿಗೂ ಕಾಡಿಗೆ ಹಚ್ಚಿ ಕೊಂಡು ಅಧರ ಮತ್ತು ಕಪೋಲಗಳಿಗೆ ಅಲತಿಗೆಯ ಕೆಂಪು ಬಣ್ಣವನ್ನು ಬಳಿದುಕೊಂಡು ಜೀರ್ಣ ಯೌವನವನ್ನು ವಿಚಿತ್ರ ಮೋಸದಿಂದ ಮುಚ್ಚಿ, ಮುಗುಳುದೊಡನೆ ಎಲ್ಲೆಯಿಲ್ಲದ ಧೈರ್ಯದೊಡನೆ ನೂತನ ಹೃದಯವನ್ನು ಸೂರೆಗೊಳ್ಳಲು ಹೊಸ ಮಾಯಾಜಾಲವನ್ನು ಬೀಸಬೇಕಾಗುವುದೆಂದು ಅವಳು ತಿಳಿದುಕೊಂಡಾಗ—ಅವಳು ಮನೆಯ ಬಾಗಿಲನ್ನು ಹಾಕಿಕೊಂಡು ನೆಲದ ಮೇಲೆ ಹೊರಳುತ್ತ ಬಾರಿಬಾರಿಗೆ ಕಠಿಣವಾದ ಮೇಜಿಗೆ ತಲೆಯನ್ನು ಹೊಡೆದು

ಕೊಳ್ಳುತ್ತಿದ್ದಳು. ದಿನವೆಲ್ಲಾ ಊಟಮಾಡದೆ ರೋಗಿಯಂತೆ ಬಿದ್ದುಕೊಂಡಿದ್ದಳು. ಸಂಜೆಯಾಗತೊಡಗಿತು. ದೀಪವಿಲ್ಲದ ಮನೆಯ ಮೂಲೆಯಲ್ಲಿ ಕತ್ತಲೆ ಬಲವಾಗತೊಡಗಿತು. ದೈವವಶಾತ್ ಒಬ್ಬ ಹಳೆಯ ಪ್ರೇಮಿಯು ಕ್ಷೀರೋದಾ! ಕ್ಷೀರೋದಾ! ಎಂದು ಬಾಗಿಲನ್ನು ತಟ್ಟಲಾರಂಭಿಸಿದನು. ಕ್ಷೀರೋದೆಯು ಛಟ್ಟನೆ ಬಾಗಿಲನ್ನು ತೆಗೆದು ಪೊರಕೆಯನ್ನು ಕೈಯಲ್ಲಿ ಹಿಡಿದುಕೊಂಡು ಹೆಣ್ಣುಹುಲಿಯಂತೆ ಹೊರಬೀಳಲು—ರಸಪಿಪಾಸು ಯುವಕನು ವಿಳಂಬ ಮಾಡದೆ ಪಲಾಯನ ಪಥವನ್ನು ಅವಲಂಬಿಸಿದನು.

ಹುಡುಗನು ಹಸಿವೆಯ ಬಾಧೆಯಿಂದ ಅತ್ತು ಅತ್ತು ದಣಿದು ಮಂಚದ ಅಡಿಯಲ್ಲಿ ಮಲಗಿ ನಿದ್ರಿಸುತ್ತಿದ್ದು ಈ ಗದ್ದಲದಿಂದ ಎಚ್ಚೆತ್ತು ಕತ್ತಲೆಯಲ್ಲಿ ಸೊರಗಿದ ಧ್ವನಿಯಲ್ಲಿ ಅಮ್ಮ-ಅಮ್ಮ ಎಂದು ಅಳತೊಡಗಿದನು.

ಆಗ ಕ್ಷೀರೋದೆಯು ಅಳುತ್ತಲಿದ್ದ ಆ ಮಗುವನ್ನು ಎದೆಗೆ ಅಪ್ಪಿಕೊಂಡು ಮಿಂಚಿನಂತೆ ಓಡಿ ಹತ್ತಿರದಲ್ಲಿದ್ದ ಭಾವಿಯಲ್ಲಿ ಧುಮುಕಿದಳು.

ಶಬ್ದವನ್ನು ಕೇಳಿ ದೀಪವನ್ನು ಹಿಡಿದುಕೊಂಡು ನೆರೆಯವರು ಭಾವಿಯ ಹತ್ತಿರ ಬಂದು ನಿಂತರು. ಕ್ಷೀರೋದೆಯನ್ನೂ ಮಗುವನ್ನೂ ಮೇಲಕ್ಕೆತ್ತಲು ಸಾವಕಾಶವಾಗಲಿಲ್ಲ. ಕ್ಷೀರೋದೆಗೆ ಆಗ ಜ್ಞಾನವಿರಲಿಲ್ಲ. ಮಗುವಿಗೆ ಪ್ರಾಣವಿರಲಿಲ್ಲ. ಆಸ್ಪತ್ರೆಗೆ ಹೋದ ಮೇಲೆ ಕ್ಷೀರೋದೆಗೆ ಆರೋಗ್ಯವುಂಟಾಯಿತು. ಹತ್ಯೆಯ ಅಪರಾಧಕ್ಕಾಗಿ ಮ್ಯಾಜಿಸ್ಟ್ರೇಟರು ಅವಳನ್ನು ಸೆಷನ್ಸಿಗೆ ಕಳುಹಿಸಿದರು.

## ಎರಡನೆಯ ಪರಿಚ್ಛೇದ

ನ್ಯಾಯಮೂರ್ತಿ ಮೋಹಿತ ಮೋಹನದತ್ತರು ಸ್ಟ್ಯಾಟ್ಯೂಟರಿ ಸಿವಿಲಿಯನ್ನರು. ಅವರ ಕಠಿಣ ವಿಚಾರಣೆಯಲ್ಲಿ ಕ್ಷೀರೋದೆಗೆ ಫಾಸೀ ಸಜವಾಯಿತು. ನಿರ್ಭಾಗ್ಯಳ ಸ್ಥಿತಿಯನ್ನು ಆಲೋಚಿಸಿ ವಕೀಲರುಗಳು ಅವಳನ್ನು ಉಳಿಸುವುದಕ್ಕಾಗಿ ವಿಶ್ವಪ್ರಯತ್ನಮಾಡಿದರು. ಆದರೆ ಯಾವ ವಿಧದಲ್ಲೂ ಕೃತಕಾರ್ಯರಾಗಲಿಲ್ಲ. ಜಡ್ಜಿಗಳು ಅವಳು ಎಳ್ಳಷ್ಟು ದಯೆಗೂ ಪಾತ್ರಳೆಂದು ಎಣಿಸಲಿಲ್ಲ.

ಹಾಗೆ ಎಣಿಸದಿರಲು ಕಾರಣವಿದೆ. ಒಂದು ಕಡೆ ಅವರು ಹಿಂದೂ ಮಹಿಳೆಯರಿಗೆ ದೇವಿಯರೆಂದು ಹೆಸರಿಟ್ಟು ಇದ್ದರೂ ಮತ್ತೊಂದು ಕಡೆ ಅವ

ರಿಗೆ ಸ್ತ್ರೀಜಾತಿಯಲ್ಲೇ ಅಪನಂಬಿಕೆ. ರಮಣಿಯರು ಕುಲದ ಬಂಧನವನ್ನು ಕತ್ತರಿಸಿ ಓಡಿ ಹೋಗಲು ಸದಾ ಯತ್ನಿಸುತ್ತಲಿರುವರೆಂದು ಅವರ ತೀರ್ಮಾನ. ಕಟ್ಟು ಎಳ್ಳಷ್ಟು ಶಿಥಿಲವಾದರೂ ಸಮಾಜದ ಪಂಜರದಲ್ಲಿ ಒಬ್ಬ ಕುಲ ಸ್ತ್ರೀಯೂ ಇರಳು ಎಂದು ಅವರ ನಂಬಿಕೆ.

ಅವರಿಗೆ ಹೀಗೆ ನಂಬಿಕೆಯುಂಟಾಗಲು ಕಾರಣವೂ ಇದೆ. ಆ ಕಾರಣ ವನ್ನು ತಿಳಿಯಲೆತ್ನಿಸುವುದಾದರೆ ಮೋಹಿತನ ಯೌವನದ ಇತಿಹಾಸದ ಕೆಲವು ಅಂಶಗಳನ್ನು ವಿಚಾರಿಸಿ ನೋಡಬೇಕಾಗಿದೆ.

ಮೋಹಿತಬಾಬು ಕಾಲೇಜಿನಲ್ಲಿ ಸೆಕೆಂಡ್ ಇಯರ್‌ನಲ್ಲಿ ಓದುತ್ತಿದ್ದಾಗ ಆಕಾರ ಮತ್ತು ಆಚಾರದಲ್ಲಿ ಸಂಪೂರ್ಣ ಬೇರೆ ರೀತಿಯ ಮನುಷ್ಯನಾಗಿದ್ದನು. ಈಗ ಮೋಹಿತನ ಮುಂಭಾಗದಲ್ಲಿ ಪಂಚಗಚ್ಚೆ ಹಿಂಭಾಗದಲ್ಲಿ ಜುಟ್ಟು ಇವೆ. ಅಲಂಕಾರವಾದ ಮುಖದಲ್ಲಿ ಪ್ರತಿದಿನ ಬೆಳಗ್ಗೆ ಹರಿತವಾದ ಕತ್ತಿಯಿಂದ ಗಡ್ಡದ ಕೂದಲಿನ ಮೊಳಕೆಗಳು ತೆಗೆದುಹಾಕಲ್ಪಡುತ್ತಿದೆ. ಆದರೆ ಆಗ ಅವನ ಚಿನ್ನದ ಕನ್ನಡಕ. ಗಡ್ಡ ಮೀಸೆ ಮತ್ತು ಇಂಗ್ಲಿಷರ ಪದ್ಧತಿಯ ಕೇಶವಿನ್ಯಾಸದಿಂದ ಕಾರ್ತಿಕದೇವನ ಹತ್ತೊಂಭತ್ತನೆಯ ಶತಮಾನದ ಸಂಸ್ಕರಣದಂತೆ ಶೋಭಿಸುತ್ತಿದ್ದರು. ಉಡಿಗೆ ತೊಡಿಗೆಗಳ ವಿಷಯದಲ್ಲಿ ಪ್ರಬಲ ಆಸಕ್ತಿಯಿರುತ್ತಿತ್ತು. ಮದ್ಯ ಮಾಂಸಗಳಲ್ಲಿ ಅರುಚಿಯಿರಲಿಲ್ಲ ಮತ್ತು ಆನುಷಂಗಿಕವಾಗಿ ಅವುಗಳೊಡನೆ ಇನ್ನೂ ಒಂದೆರಡು ಉಪಸರ್ಗಗಳೂ ಇದ್ದುವು.

ಸಮೀಪದಲ್ಲಿ ಗೃಹಸ್ಥರ ಮನೆಯೊಂದಿತ್ತು. ಅವರಿಗೆ ಹೇಮಶಶಿ ಯೆಂಬ ವಿಧವೆ ಕನ್ಯೆಯೊಬ್ಬಳಿದ್ದಳು. ಅವಳ ವಯಸ್ಸೂ ಹೆಚ್ಚಿರಲಿಲ್ಲ. ಹದಿನಾಲ್ಕು ದಾಟಿ ಹದಿನೈದಿರಬಹುದು.

ಗಿಡಮರಗಳಿಂದ ಕೂಡಿದ ತುಂಬಿದ ತೀರಪ್ರದೇಶವು ಸಮುದ್ರದಿಂದ ಹೇಗೆ ರಮಣೀಯವಾಗಿ ಸ್ವಪ್ನ ಚಿತ್ರದಂತೆ ತೋರುವುದೋ ಹಾಗೆ ದಡವನ್ನು ಸೇರಿದಾಗ ಇರದು. ವೈಧವ್ಯದ ಮುಸುಕಿನೊಳಗೆ ಹೇಮಶಶಿಯು ಸಂಸಾರ ದಿಂದ ಎಷ್ಟು ದೂರವಾಗಿದ್ದಳೋ, ಆ ದೂರದ ವಿಚ್ಛೇದದ ಕಾರಣದಿಂದ ಪ್ರಪಂಚವು ಅವಳಿಗೆ ಆಚೆಯ ತೀರದ ಪರಮ ರಹಸ್ಯಮಯ ಪ್ರಮೋದ ವನದಂತೆ ಕಾಣುತ್ತಿತ್ತು. ಈ ಜಗತ್-ಯಂತ್ರದ ಕಾರಖಾನೆಯು ಅತಿ

ಜಟಿಲವೂ ಕಬ್ಬಿಣದಂತೆ ಕಠಿಣವೂ ಸುಖದಿಂದ, ಸಂಪತ್ತು ವಿಪತ್ತುಗಳಿಂದ ಸಂಶಯ ಸಂಕಟ ಮತ್ತು ನಿರಾಶೆ ಪರಿತಾಪಗಳಿಂದ ತುಂಬಿರುವುದೆಂಬುದನ್ನೂ ಅವಳು ಅರಿಯಳು. ಬಾಳುವೆಯ ಹೊಳೆಯು ಕಲನಾದಿನಿ ನಿರ್ಝರಿಣಿಯಂತೆ, ಸ್ವಚ್ಛ ಜಲಪ್ರವಾಹದಂತೆ ಸಹಜವೆಂದೂ ಎದಿರಿನಲ್ಲಿ ಕಾಣುವ ಪೃಥ್ವಿಯ ಎಲ್ಲ ಮಾರ್ಗಗಳೂ ಪ್ರಶಸ್ತವೂ ಸರಳವೂ ಎಂದೂ, ಸುಖವು ಕೇವಲ ತನ್ನ ವಕ್ಷಪಂಜರದಲ್ಲಿರುವ ಕೋಮಲ ಹೃದಯದಲ್ಲಿ ಮಾತ್ರವೇ ಎಂದೂ ಅವಳ ನಂಬಿಕೆ.

ವಿಶೇಷತಃ ಆ ಸಮಯದಲ್ಲಿ ಅವಳ ಅಂತರಾಕಾಶದ ದೂರಕ್ಷಿತಿಜದಿಂದ ಒಂದು ಯೌವನ ಸಮೀರಣವು ಹಾಯ್ದು ಪ್ರಪಂಚವನ್ನು ವಿಚಿತ್ರ ವಾಸಂತೀ ವರ್ಣದಿಂದ ಅಲಂಕಾರಗೊಳಿಸಿತ್ತು. ಸಮಸ್ತ ನೀಲಾಕಾಶವು ಅವಳ ಹೃದಯ ಹಿಲ್ಲೋಲದಿಂದ ತುಂಬಿತ್ತು ; ಮತ್ತು ಪೃಥ್ವಿಯು ಅವಳ ಸುಗಂಧ ಮರ್ಮಕೋಶದ ನಾಲ್ಕು ಕಡೆಗಳಲ್ಲಿಯೂ ಕೆಂದಾವರೆಯ ಕೋಮಲ ಪಟಲಗಳಂತೆ ಪದರ ಪದರವಾಗಿ ಅರಳಿದ್ದಂತೆ ಇರುತ್ತಿತ್ತು.

ಮನೆಯಲ್ಲಿ ಅವಳ ತಾಯಿ ತಂದೆ ಮತ್ತು ಇಬ್ಬರು ತಮ್ಮಂದಿರಲ್ಲದೆ ಮತ್ತಾರೂ ಇರಲಿಲ್ಲ. ತಮ್ಮಂದಿರಿಬ್ಬರೂ ಬೆಳಗ್ಗೆ ಹೊತ್ತಿರುವಾಗಲೇ ಊಟ ಮಾಡಿ ಶಾಲೆಗೆ ಹೋಗುತ್ತಿದ್ದರು. ಪುನಃ ಸ್ಕೂಲಿನಿಂದ ಹಿಂತಿರುಗಿದಾಗ ಊಟಮಾಡಿ ಕೇರಿಯಲ್ಲಿದ್ದ ರಾತ್ರಿಯ ಶಾಲೆಯಲ್ಲಿ ಪಾಠ ಕಲಿಯಲು ಹೋಗುತ್ತಿದ್ದರು. ತಂದೆಯು ಸಣ್ಣ ಸಂಬಳದವನು. ಮನೆಯಲ್ಲಿ ಮೇಷ್ಟರನ್ನು ಇಡುವ ಶಕ್ತಿಯಿಲ್ಲದವನು.

ಕೆಲಸ ಮುಗಿದು ವಿರಾಮವಾದಾಗ ಹೇಮ ತನ್ನ ಕೊಠಡಿಯ ಕಿಟಕಿಯ ಹತ್ತಿರ ಬಂದು ಕುಳಿತಿರುತ್ತಿದ್ದಳು. ಒಂದೇ ದೃಷ್ಟಿಯಿಂದ ಹೆದ್ದಾರಿಯಲ್ಲಿ ತಿರುಗಾಡುವ ಜನರನ್ನು ನೋಡುತ್ತಿದ್ದಳು. ಸಾಮಾನು ಹೊತ್ತು ಮಾರುವವರು ಕರುಣ ಉಚ್ಚಸ್ವರದಲ್ಲಿ ಕೂಗುತ್ತ ಹೋಗುತ್ತಿದ್ದುದನ್ನು ನೋಡುವಳು. ದಾರಿಗರು ಸುಖಿಗಳು, ಭಿಕ್ಷುಕರೋ ಸ್ವತಂತ್ರರು ಮತ್ತು ಬೀದಿಯಲ್ಲಿ ಸಾಮಾನು ಮಾರುವವರು ಜೀವನಕ್ಕಾಗಿ ಬಲು ಕಷ್ಟಪಡಬೇಕಾದುದಿಲ್ಲ. ಇವರೆಲ್ಲ ಈ ಜಗನ್ನಾಟಕದ ಪಾತ್ರಧಾರಿಗಳು ' ಎಂದು ಮನಸ್ಸಿನಲ್ಲಿ ಯೋಚಿಸುತ್ತಿರುವಳು. ಅಲ್ಲದೆ ಬೆಳಗ್ಗೆ ಮತ್ತು ಸಂಜೆಯಲ್ಲಿ ಪರಿಪಾಠಿ ವೇಷಧಾರಿಯಾದ,

ಗರ್ವೋದ್ಧತನಾದ ಮತ್ತು ಸ್ಫೀತವಕ್ಷನಾದ ಮೋಹಿತ ಮೋಹನನನ್ನು ನೋಡ ಬಹುದಾಗಿತ್ತು. ನೋಡಿ ಆತನನ್ನು ಸರ್ವಸೌಭಾಗ್ಯಸಂಪನ್ನನಾದ ಪುರುಷ ಶ್ರೇಷ್ಠ ಮಹೇಂದ್ರನಂತೆ ಮನದಲ್ಲಿ ಭಾವಿಸಿದಳು. ಉನ್ನತಮಸ್ತಕ ಸುವೇಶ ಸುಂದರ ಯುವಕನಿಗೆ ಎಲ್ಲ ಇತ್ತೆಂದೂ ಮತ್ತು ಆತನಿಗೇ ಸಕಲ ಸಮರ್ಪಣೆ ಮಾಡಬಹುದೆಂದೂ ಭಾವಿಸಿದಳು. ಬಾಲಿಕೆಯರು ಹೇಗೆ ಗೊಂಬೆಗಳನ್ನು ಸಜೀವ ಮನುಷ್ಯರೆಂದು ಭಾವಿಸಿ ಆಟವಾಡುವರೋ, ಹಾಗೇ ಆ ವಿಧವೆಯು ಮೋಹಿತನನ್ನು ಎಲ್ಲ ಮಹಿಮೆಗೂ ಬಾಧ್ಯನೆಂದು ಭಾವಿಸಿ, ಆತನನ್ನೇ ತನ್ನ ಆರಾಧ್ಯದೇವತೆಯನ್ನಾಗಿ ಮಾಡಿಕೊಂಡು ಆಟವಾಡುತ್ತಿದ್ದಳು.

ಒಂದೊಂದು ದಿನ ಸಂಜೆ ವೇಳೆಯಲ್ಲಿ ಮೋಹಿತನ ಕೊಠಡಿಯು ಬೆಳಕಿನ ಪ್ರಕಾಶ, ನರ್ತಕಿಯರ ಗೆಜ್ಜೆಯ ಶಬ್ದ ಮತ್ತು ಸ್ತ್ರೀಯರ ಕಂಠದ ಸಂಗೀತ ದಿಂದ ತುಂಬಿರುತ್ತಿದ್ದುದನ್ನು ಕಾಣುತ್ತಿದ್ದಳು. ಅಂದು ಅವಳು ಗೋಡೆಯ ಮೇಲೆ ಬೀಳುತ್ತಿದ್ದ ಚಂಚಲ ಛಾಯೆಯನ್ನು ನೋಡುತ್ತ ನಿದ್ರೆಯಿಲ್ಲದ ಆಶೆ ಯಿಂದ ತುಂಬಿದ ದೃಷ್ಟಿಯೊಡನೆ ರಾತ್ರಿಯೆಲ್ಲ ಎಚ್ಚೆತ್ತು ಕುಳಿತು ಕಳೆದಳು. ಅವಳ ವ್ಯತಿಥ ಪೀಡಿತ ಹೃತ್ಪಿಂಡವು ಪಂಜರದ ಪಕ್ಷಿಯಂತೆ ಎದೆಯ ಗೂಡಿನ ಮೇಲೆ ಬಲವಾಗಿ ಬಡಿದುಕೊಳ್ಳ ತೊಡಗಿತು.

ಅವಳು ತನ್ನ ಕೃತ್ರಿಮದೇವತೆಯನ್ನು ವಿಲಾಸ ಮತ್ತತೆಗಾಗಿ ಮನಸ್ಸಿ ನಲ್ಲೇ ಅಲ್ಲಗಳೆದು ನಿಂದಿಸುತ್ತಿದ್ದಳೇನು. ಹಾಗೆ ಮಾಡುತ್ತಿರಲಿಲ್ಲ. ಅಗ್ನಿಯು ಹೇಗೆ ಪತಂಗಕ್ಕೆ ನಕ್ಷತ್ರದ ಬೆಳಕಿನ ಆಶೆಯನ್ನು ತೋರಿಸಿ ಸೆಳೆಯುವುದೋ ಹಾಗೆ ಮೋಹಿತನ ಮನೆಯ ಕೊಠಡಿಯ ಬೆಳಕು ಗೀತ ವಾದ್ಯ ಮತ್ತು ಆ ಮೋದದಿಂದ ತುಂಬಿ ಹೇಮಶಶಿಯ ಕಣ್ಣಿಗೆ ಅದೇ ರೀತಿಯಲ್ಲಿ ಸ್ವರ್ಗದ ಬಿಸಿಲ್ಗುದುರೆಯನ್ನು ತೋರಿಸಿ ಆಕರ್ಷಿಸುತ್ತಿತ್ತು. ಅವಳು ಗಭೀರ ರಾತ್ರಿ ಯಲ್ಲಿ ಒಬ್ಬಳೇ ಎಚ್ಚೆತ್ತು ಕುಳಿತು ಆ ಸಮೀಪದ ಕಿಟಕಿಯ ಬೆಳಕು, ನೆರಳು, ಸಂಗೀತ ತನ್ನ ಮನದ ಆಶೆ ಮತ್ತು ಕಲ್ಪನೆಗಳಿಂದ ಒಂದು ಮಾಯಾಲೋಕ ವನ್ನು ಸೃಷ್ಟಿಸಿಕೊಳ್ಳುತ್ತಿದ್ದಳು; ಮತ್ತು ತನ್ನ ಮಾನವನ ಪ್ರತಿಮೆಯನ್ನು ಆ ಮಾಯಾಪುರಿಯ ನಡುವೆ ಪ್ರತಿಷ್ಠಿಸಿ ವಿಸ್ಮೃತ ವಿಮುಗ್ಧ ನೇತ್ರಗಳಿಂದ ನೋಡುತ್ತಿದ್ದಳು. ಹಾಗೆಯೇ ತನ್ನ ಜೀವಮಾನ, ಯೌವನ, ಸುಖದುಃಖ ಇಹಕಾಲ ಪರಕಾಲ ಎಲ್ಲವನ್ನೂ ಜನ್ಮಾಂತರ ವಾಸನೆಯ ಬೆಂಕಿಯಲ್ಲಿ ಧೂಪ

ದಂತೆ ಉರಿಸಿ ಆ ನಿರ್ಜನ ನಿಸ್ತಬ್ಧ ಮಂದಿರದಲ್ಲಿ ಆ ಪ್ರತಿಮೆಯ ಪೂಜೆಯನ್ನು ಮಾಡುತ್ತಿದ್ದಳು. ತನ್ನ ಇದಿರಿನಲ್ಲಿರುವ ಈ ಗುಡಿಸಿಲ ಕಿಟಕಿಯ ಒಳಗಿನ ಈ ತರಂಗಿತ ಪ್ರಮೋದ ಪ್ರವಾಹದ ಮಧ್ಯದಲ್ಲಿ ಒಂದು ನಿರತಿಶಯವಾದ ದಣಿವು, ನಾಶ, ಕಳಂಕ, ಬೀಭತ್ಸಕ್ಷುಧೆ ಮತ್ತು ಪ್ರಾಣವನ್ನು ಹೀರುವ ದಾಹ ಇವುಗಳಿವೆಯೆಂಬುದನ್ನು ಅವಳು ಅರಿಯಳು. ಈ ವೀತನಿದ್ರ ನಿಶಾಚರ ಪ್ರಕಾಶದ ನಡುವೆ ಯಾವ ಹೃದಯ ಹೀನ ನಿಷ್ಠುರತೆಯು ಪ್ರಲಯ ಕ್ರೀಡೆ ಯಾಡುತ್ತಿರುವುದೋ ಅದನ್ನು ಆ ವಿಧವೆಯು ದೂರದಿಂದ ಕಾಣಲಾರ ದಿದ್ದಳು.

ಹೇಮ ತನ್ನ ಕಿಟಕಿಯಲ್ಲಿ ಕುಳಿತು ತನ್ನ ಈ ಮಾಯಾ ಸ್ವರ್ಗ ಮತ್ತು ಕಲ್ಪಿತ ದೇವತೆಯನ್ನು ಧ್ಯಾನಿಸುತ್ತ ಚಿರಕಾಲ ಸ್ವಪ್ನ ವಶದಲ್ಲೇ ಕಾಲ ಕಳೆಯುತ್ತಿದ್ದಳು. ಆದರೆ ದುರ್ಭಾಗ್ಯ ವಶದಿಂದ ಅವಳ ದೇವತೆಯು ಅನುಗ್ರಹಿಸಲು ಅವಳಿಗೆ ಸ್ವರ್ಗವು ಕೈಗೇ ಸಿಕ್ಕಿದಂತಾಯಿತು. ಒಮ್ಮೆಗೆ ಪೃಥ್ವಿಯನ್ನು ಬಂದು ಮುಟ್ಟಲು ಸ್ವರ್ಗವು ಒಡೆದೇ ಹೋಯಿತು ಮತ್ತು ಇಷ್ಟು ದಿನವೂ ಒಂಟಿಯಾಗಿ ಕುಳಿತು ಸ್ವರ್ಗದ ಸ್ವಪ್ನವನ್ನು ಕಾಣುತ್ತಿದ್ದ ವ್ಯಕ್ತಿಯೂ ಹಾಳಾದಳು.

ಈ ಕಿಟಕಿಯಲ್ಲಿ ವಾಸಿಸುವ ಮುಗ್ಧ ಬಾಲಕೆಯ ಕಡೆಗೆ ಮೋಹಿತನ ಆಶಾಪೂರಿತ ದೃಷ್ಟಿಯು ಯಾವಾಗ ಬಿದ್ದಿತೋ, ಯಾವ ಸಮಯದಿಂದ ಅವಳಿಗೆ 'ವಿನೋದ ಚಂದ್ರ' ಎಂಬ ಸುಳ್ಳು ಹೆಸರಿನಲ್ಲಿ ಸಹಿ ಮಾಡಿದ ಕಾಗದ ಗಳನ್ನು ಅಡಿಗಡಿಗೆ ಬರೆಯಲಾರಂಭಿಸಿದನೋ, ಕೊನೆಗೆ ಒಂದು ದಿನ ಭಯ, ನಾಚಿಕೆಗಳಿಂದ ಕೂಡಿದ ತಪ್ಪುಗಳಿಂದ ತುಂಬಿದ ಉತ್ತರವು ಸಿಕ್ಕಿತೋ— ಅನಂತರ ಕೆಲಕಾಲ ಘಾತ—ಪ್ರತಿಘಾತಗಳಲ್ಲಿ ಉಲ್ಲಾಸ—ಸಂಕೋಚ, ಸಂದೇಹ—ಸಂಭ್ರಮಗಳಿಂದ ಆಶೆಯ ಪ್ರವಾಹವು ಹೇಗೆ ವೇಗವಾಗಿ ಹರಿಯ ತೊಡಗಿತೋ— ಆಮೇಲೆ ಸುಖದ ಪ್ರಲಯೋನ್ಮತ್ತ ನೃತ್ಯದಲ್ಲಿ ಸಮಸ್ತ ಪ್ರಪಂಚವೂ ವಿಧವೆಯ ಸುತ್ತಲೂ ತಿರುಗತೊಡಗಿತೋ ; ತಿರುಗುತ್ತ ತಿರುಗುತ್ತ ತಿರುಗುವ ವೇಗದಲ್ಲಿ ಜಗತ್ತೆಲ್ಲವೂ ಸಂಪೂರ್ಣ ಛಾಯೆಯಂತೆ ಹೇಗೆ ಅದೃಶ್ಯ ವಾಯಿತೋ ಕೊನೆಗೆ ಒಂದು ದಿನ ಆಕಸ್ಮತ್ತಾಗಿ ಆ ತಿರುಗುವ ಸಂಸಾರ ಚಕ್ರ ದಿಂದ ವೇಗವಾಗಿ ಬೇರ್ಪಡಿಸಲ್ಪಟ್ಟ ರಮಣಿಯು ಅತಿ ದೂರದಲ್ಲಿ ಬಿಸಾಡ

ಲ್ಪಟ್ಟಳೋ ಈ ಎಲ್ಲ ವಿವರಗಳನ್ನು ವಿಸ್ತರಗೊಳಿಸಿ ಹೇಳಬೇಕಾದ ಅವಶ್ಯಕತೆ ಯಿಲ್ಲ.

ಒಂದು ದಿನ ಮಧ್ಯ ರಾತ್ರಿಯಲ್ಲಿ ತಂದೆ, ತಾಯಿ, ತಮ್ಮಂದಿರು ಮತ್ತು ಮನೆ ಎಲ್ಲವನ್ನೂ ಬಿಟ್ಟು ಹೇಮಶಶಿಯು 'ವಿನೋದ ಚಂದ್ರ' ನೆಂದು ಸುಳ್ಳು ಹೆಸರನ್ನಿಟ್ಟುಕೊಂಡಿರುವವನ ಸಂಗಡ ಒಂದು ಗಾಡಿಯಲ್ಲಿ ಕುಳಿತಳು. ದೇವ ಪ್ರತಿಮೆಯು ತನ್ನ ಹುಲ್ಲು ಮಣ್ಣು ಮತ್ತು ಬಣ್ಣಗಳ ಒಡವೆಗಳೊಡನೆ ಅವಳಿಗೆ ಪ್ರತ್ಯಕ್ಷವಾಗಿ ಅವಳ ಮಗ್ಗುಲಲ್ಲಿ ಕುಳಿತಾಗ ಅವಳು ನಾಚಿಕೆಯಿಂದ ನೆಲಕ್ಕೆ ಕುಗ್ಗಿ ಹೋದಳು.

ಗಾಡಿಯು ಹೊರಡಲು ಅವಳು ಮೋಹಿತನ ಕಾಲು ಹಿಡಿದುಕೊಂಡು 'ನಿಮ್ಮ ದಮ್ಮಯ್ಯ ನನ್ನನ್ನು ನಮ್ಮ ಮನೆಯಲ್ಲಿ ಬಿಟ್ಟುಬಿಡಿ' ಎಂದು ಹೇಳ ತೊಡಗಿದಳು. ಮೋಹಿತನು ಬೆದರಿ ಅವಳ ಬಾಯನ್ನು ಬಲವಾಗಿ ಮುಚ್ಚಿ ಹಿಡಿದನು. ಗಾಡಿಯು ವೇಗವಾಗಿ ಹೊರಟು ಹೋಯಿತು.

ನೀರಿನಲ್ಲಿ ಮುಳುಗಿ ಸಾಯಲಿರುವ ವ್ಯಕ್ತಿಗೆ ಕ್ಷಣ ಮಾತ್ರದಲ್ಲಿ ಜೀವ ಮಾನದ ಎಲ್ಲ ಘಟನೆಗಳೂ ಸ್ಪಷ್ಟವಾಗಿ ನೆನೆಪಾಗುವುದಂತೆ ಹಾಗೆಯೇ—ಆ ಬಾಗಿಲು ಮುಚ್ಚಿದ್ದ ಗಾಡಿಯಲ್ಲಿ ಕುಳಿತಿದ್ದ ಹೇಮಶಶಿಯ ಮನಸ್ಸಿನಲ್ಲಿ ಅವಳ ಬಾಳುವೆಯ ದೈನಿಕ ಘಟನೆಗಳು ತೋರ ತೊಡಗಿದವು—ಪ್ರತಿನಿತ್ಯ ಊಟದ ವೇಳೆಯಲ್ಲಿ ಅವಳ ತಂದೆ ಅವಳನ್ನು ತನ್ನ ಇದಿರಿನಲ್ಲಿ ಕೂರಿಸಿ ಕೊಂಡಲ್ಲದೆ ಊಟ ಮಾಡುತ್ತಿರಲಿಲ್ಲ—ಅವಳ ಕೊನೆಯ ತಮ್ಮನು ಸ್ಕೂಲಿ ನಿಂದ ಹಿಂದಿರುಗಿದ ನಂತರ ಅಕ್ಕನು ಬಡಿಸಿದರೇನೆ ಸಂತೋಷದಿಂದ ಊಟ ಮಾಡುತ್ತಿದ್ದನು—ಬೆಳಗ್ಗೆ ಅವಳು ತಾಯಿಯ ಸಂಗಡ ಮನೆಗೆಲಸ ಮಾಡು ತ್ತಿದ್ದಳು—ಸಂಜೆಗೆ ತಾಯಿಯು ಅವಳ ತಲೆಯ ಕೂದಲನ್ನು ಬಾಚುತ್ತಿದ್ದಳು ಹೀಗೆ ಮನೆಯ ಪ್ರತಿಯೊಂದು ಮೂಲೆ—ನಿತ್ಯದ ಅತಿ ಕ್ಷುದ್ರ ಕೆಲಸ ಇವೆಲ್ಲವೂ ಅವಳಿಗೆ ನೆನಪಾಗ ತೊಡಗಿದವು. ಆಗ ಅವಳಿಗೆ ತನ್ನ ಬಾಳೂ, ಆ ಕ್ಷುದ್ರ ಸಂಸಾರವೂ ಸ್ವರ್ಗದಂತೆ ತೋರ ತೊಡಗಿದವು. ಆ ಮನೆಗೆಲಸ, ಹಾಗೆ ತಲೆ ಬಾಚಿಕೊಳ್ಳುವುದು ತಂದೆಯು ಊಟಮಾಡುವಾಗ ಬೀಸಣಿಗೆ ಬೀಸುತ್ತಿ ದ್ದುದು, ರಜದ ದಿನ ಮಧ್ಯಾಹ್ನದ ಹೊತ್ತಿನಲ್ಲಿ ತಂದೆಯ ತಲೆಯಲ್ಲಿದ್ದ ನೆರೆ

ಗೂಡಲನ್ನು ಆಯ್ದು ತೆಗೆದು ಹಾಕುತ್ತಿದ್ದುದು ತಮ್ಮಂದಿರ ತುಂಟಾಟವನ್ನು ಸಹಿಸುತ್ತಿದು ಎಲ್ಲವೂ ಅವಳಿಗೆ ನೆನಪಾಯಿತು.' ಇವೆಲ್ಲವೂ ಇದ್ದರೆ ಪ್ರಂಪಚ ದಲ್ಲಿ ಮತ್ತಾವ ಸುಖವೂ ಆವಶ್ಯಕವಿಲ್ಲವೆಂಬುದನ್ನು ಅವಳು ತಿಳಿದು ಕೊಳ್ಳಲಿಲ್ಲ.

ಭೂಮಿಯ ಮೇಲೆ ಮನೆಯಲ್ಲಿ ಎಲ್ಲ ಕುಲಕನ್ಯೆಯರೂ ಈ ಸಮಯದಲ್ಲಿ ಗಾಢನಿದ್ರೆಯಲ್ಲಿರುವರೆಂದು ಅವಳ ಮನಸ್ಸಿಗೆ ತೋರ ತೊಡಗಿತು. ತನ್ನ ಮನೆಯಲ್ಲಿ ತನ್ನ ಹಾಸಿಗೆಯ ಮೇಲೆ ನಿಸ್ತಬ್ಧ ರಾತ್ರಿಯಲ್ಲಿ ನಿಶ್ಚಿಂತ ನಿದ್ರೆಯು ಎಷ್ಟು ಸುಖಕರವಾಗಿರುವುದೆಂಬುದು ಅದುವರಿಗೂ ಅವಳಿಗೆ ತೋರಲಿಲ್ಲ. ಕುಲಸ್ತ್ರೀಯರು ನಾಳೆ ಬೆಳಗ್ಗೆ ಎದ್ದು ನಿಸ್ಸಂಕೋಚದಿಂದ ನಿತ್ಯಕರ್ಮದಲ್ಲಿ ತೊಡಗುವರು—ಗೃಹಚ್ಯುತಳಾದ ಹೇಮಶಶಿಯು ಈ ನಿದ್ರಾಹೀನ ರಾತ್ರಿಯು ಎಲ್ಲಿ ಸೇರಿದನಂತರ ಬೆಳಗಾಗುವುದೊ ಮತ್ತು ಆ ನಿಶಾಂತದ ಪ್ರಭಾತದಲ್ಲಿ ಅವರ ಆ ಓಣಿಯಲ್ಲಿರುವ ಕುಟುಂಬದ ಮೇಲೆ ಬೆಳಗಿನ ಚಿರಪರಿಚಿತ ಶಾಂತಿ ಮಯ ಹಾಸ್ಯಮಯ ಎಳೆಬಿಸಲು ಬಿದ್ದಾಗ; ಆ ವೇಳೆಯಲ್ಲಿ ಅಲ್ಲಿ ಅಕ ಸ್ಮಾತ್ತಾಗಿ ಎಂತಹ ಲಜ್ಜೆಯು ತಲೆಹಾಕುವುದು—ಎಷ್ಟು ನಾಚಿಕೆ—ಎಷ್ಟು ದುಃಖವು ಎಚ್ಚರಗೊಳ್ಳುವುದು— ಎಂಬಿವೆಲ್ಲವೂ ಅವಳ ಮನಸ್ಸಿನಲ್ಲಿ ತೋರ ತೊಡಗಿದವು.

ಹೇಮಳು ಎದೆಯೊಡೆಯುವಂತೆ ಅಳತೊಡಗಿದಳು. ಅತಿ ಅನುನಯ ವಿನಯಗಳೊಡನೆ—'ಇನ್ನೂ ರಾತ್ರಿಯು ಉಳಿದಿದೆ' ನಮ್ಮ ತಾಯಿ, ನನ್ನ ತಮ್ಮಂದಿರು ಇನ್ನೂ ಎಚ್ಚೆತ್ತಿರುವುದಿಲ್ಲ—ಈಗಲಾದರೂ ನನ್ನನ್ನು ಹಿಂದಕ್ಕೆ ಕರೆದುಕೊಂಡುಹೋಗಿ ಬಿಟ್ಟುಬಿಡಿ' ಎಂದು ಬೇಡಿಕೊಂಡಳು—ಆದರೆ ಅವಳ ದೇವತೆಯು ಆ ಮಾತುಗಳನ್ನು ಲಕ್ಷಿಸಲಿಲ್ಲ. ಚಕ್ರದ ಶಬ್ದದಿಂದ ವಿಜೃಂಭಿಸು ತ್ತಿದ್ದ ಎರಡನೆಯ ದರ್ಜೆಯ ಹಳೆಯ ಕುದುರೇ ಗಾಡಿಯಲ್ಲಿ, ಅವಳು ಬಹು ದಿನಗಳಿಂದ ಆಶೆಪಟ್ಟು ಕನಸು ಕಾಣುತ್ತಿದ್ದ ಸ್ವರ್ಗ ಲೋಕದ ಕಡೆಗೆ ಕರೆದು ಕೊಂಡು ಹೊರಟನು.

ಇದಾದ ಕೆಲ ದಿನಗಳ ನಂತರವೇ ದೇವತೆಯೂ ಮತ್ತು ಸ್ವರ್ಗವೂ ಮತ್ತೆ ಮತ್ತೊಂದು ಎರಡನೆಯ ದರ್ಜೆಯ ಮುರುಕಲು ಗಾಡಿಯಲ್ಲಿ ಹತ್ತಿ

ಬೇರೊಂದು ದಾರಿಯಲ್ಲಿ ನಡೆದುವು—ರಮಣಿಯು ಕುತ್ತಿಗೆಯವರೆಗೆ ಕೆಸರಿನಲ್ಲಿ ಮುಳುಗಿದ್ದಳು—!

## ಮೂರನೆಯ ಪರಿಚ್ಛೇದ

ಮೋಹಿತ ಮೋಹನನ ಪೂರ್ವ ಚರಿತ್ರೆಯಿಂದ ಇದೊಂದು ಘಟನೆಯನ್ನು ಉಲ್ಲೇಖಿಸಿರುವೆನು. ರಚನೆ—ಅರುಚಿಕರವಾದೀತೆಂದು ಮತ್ತೊಂದನ್ನು ಇಲ್ಲಿ ಹೇಳಿಲ್ಲ.

ಈಗ ಆ ಪುರಾತನ ಕಥೆಗಳನ್ನೆಲ್ಲಾ ಎತ್ತುವ ಆವಶ್ಯಕತೆಯಿಲ್ಲ. ಈಗ ಆ 'ವಿನೋದ ಚಂದ್ರ'ನ ಹೆಸರನ್ನು ನೆನಪಿನಲ್ಲಿಡುವ ವ್ಯಕ್ತಿಯೂ ಪ್ರಪಂಚದಲ್ಲಿ ಇದೆಯೋ ಇಲ್ಲವೋ ಅನುಮಾನ. ಈಗ ಮೋಹಿತನು ಶುದ್ಧ ಆಚಾರವಂತನಾಗಿರುವನು. ಅವನು ನಿತ್ಯ ಆಹ್ನೀಕ, ತರ್ಪಣಗಳನ್ನು ಮಾಡುವನು. ಸದಾ ಶಾಸ್ತ್ರಾಲೋಚನೆಯಲ್ಲಿ ನಿರತನಾಗಿರುವನು. ತನ್ನ ಸಣ್ಣ ಸಣ್ಣ ಮಕ್ಕಳಿಗೂ ಯೋಗಾಭ್ಯಾಸ ಮಾಡಿಸಿರುವನು. ಮನೆಯ ಸ್ತ್ರೀಯರನ್ನು ಸೂರ್ಯ, ಚಂದ್ರ, ವಾಯು ಇವರುಗಳು ಪ್ರವೇಶಿಸಲು ಅಸಾಧ್ಯವಾದ ಅಂತಃಪುರದಲ್ಲಿಟ್ಟು ಬಹು ಕಟ್ಟುನಿಟ್ಟಿನಿಂದ ರಕ್ಷಿಸುತ್ತಿರುವನು. ಆದರೆ ಒಂದು ಕಾಲದಲ್ಲಿ ತಾನು ಒಬ್ಬಳಿಗಿಂತಲೂ ಹೆಚ್ಚು ಸ್ತ್ರೀಯರೊಡನೆ ಅಪರಾಧ ಮಾಡಿದೆನೆಂದು ಈಗ ಸ್ತ್ರೀಯರ ಎಲ್ಲ ತರಹದ ಸಾಮಾಜಿಕ ಅಪರಾಧಗಳಿಗೆ ಕಠಿಣವಾದ ಶಿಕ್ಷೆ ವಿಧಿಸುತ್ತಿರುವನು.

ಕ್ಷಿರೋದೆಗೆ ಫಾಸೀ ಹುಕುಂ ಕೊಟ್ಟ ಒಂದೆರಡು ದಿನಗಳ ನಂತರ ಭೋಜನ ಸುಖಿ ಮೋಹಿತನು ಜೈಲಿನ ಕೈ ತೋಟದಿಂದ ಕಾಯಿಪಲ್ಯಗಳನ್ನು ಸಂಗ್ರಹಿಸಿಕೊಂಡು ಬರಲು ಹೋಗಿದ್ದನು. ಕ್ಷಿರೋದೆಯು ತನ್ನ ಪತಿತ ಜೀವನದ ಅಪರಾಧಗಳೆಲ್ಲವನ್ನೂ ಸ್ಮರಿಸಿ ಪಶ್ಚಾತ್ತಾಪ ಗೊಂಡಿರುವಳೋ ಇಲ್ಲವೋ ಎಂಬುದನ್ನು ತಿಳಿಯುವ ಕುತೂಹಲವು ಅವನಿಗಿತ್ತು. ಜೈಲಿನಲ್ಲಿ ಹೆಂಗಸರನ್ನಿಟ್ಟಿರುವ ಭಾಗಕ್ಕೆ ಹೋದನು.

ದೂರದಿಂದ ಜಗಳದ ಧ್ವನಿ ಕೇಳಿಸುತ್ತಿತ್ತು. ಕೊಠಡಿಯೊಳಕ್ಕೆ ಪ್ರವೇಶಿಸಲು ಕ್ಷಿರೋದೆಯು ಕಾವಲುಗಾರನೊಡನೆ ಬಲವಾಗಿ ಜಗಳ ಕಾಯುತ್ತಿದುದನ್ನು ಕಂಡನು. ಮೋಹಿತನು ಮನಸ್ಸಿನಲ್ಲೇ ನಕ್ಕನು. ಹೆಂಗಸರ ಸ್ವಭಾವವೇ ಹೀಗೆ ಎಂದು ಭಾವಿಸಿದನು. ಸಾಯುವ ಸಮಯ ಆಗಲೂ

ಜಗಳವಾಡುವುದನ್ನು ಬಿಟ್ಟಿಲ್ಲ. ಇವರುಗಳು ಯಮಲೋಕಕ್ಕೆ ಹೋದರೂ ಅಲ್ಲಿ ಯಮದೂತರೊಡನೆಯೂ ಜಗಳವಾಡುವುದನ್ನು ಬಿಡರು, ಎಂದು ಯೋಚಿಸಿದನು.

ಈಗ ತಕ್ಕ ಮಟ್ಟಿಗೆ ಗದರಿಸಿ ಉಪದೇಶಮಾಡಿ ಇವಳ ಮನಸ್ಸಿನಲ್ಲಿ ಪಶ್ಚಾತ್ತಾಪವನ್ನು ಉಂಟುಮಾಡುವುದು ಉಚಿತವೆಂದು ಮೋಹಿತನು ಯೋಚಿಸಿದನು. ಆ ಸದುದ್ದೇಶದಿಂದ ಅವನು ಕ್ಷಿರೋದೆಯ ಹತ್ತಿರಕೆ ಹೋಗಿ ನಿಂತೊಡನೆಯೇ ಅವಳು ಅತಿ ಕರುಣ ಸ್ವರದೊಡನೆ—ಕೈ ಮುಗಿದ್ದು ಕೊಂಡು—'ಓ, ಜಡ್ಜ ಸಾಹೇಬರೇ–ನಿಮ್ಮ ದಮ್ಮಯ್ಯ– ನನ್ನ ಉಂಗುರವನ್ನು ಕೊಡುವಂತೆ ಇವನಿಗೆ ಹೇಳಿರಿ' ಎಂದಳು.

ವಿಚಾರಿಸಿದಾಗ ಕ್ಷಿರೋದೆಯು ಕೂದಲ ಗಂಟಿನಲ್ಲಿ ಒಂದು ಉಂಗುರ ವನ್ನು ಮುಚ್ಚಿಟ್ಟುಕೊಂಡಿದ್ದಳು. ದೈವವಶಾತ್ ಕಾವಲುಗಾರನ ದೃಷ್ಟಿಗೆ ಅದು ಬಿತ್ತು. ಅವನು ಅದನ್ನು ಕಿತ್ತುಕೊಂಡಿರುವನು ಎಂಬ ವಿಷಯವು ತಿಳಿಯಿತು. ಉಂಗುರವನ್ನು ನೋಡಬೇಕೆಂದು ಮನಸಾಗಿ ಕಾವಲುಗಾರ ನನ್ನು ಕರೆದು ಅವನ ಹತ್ತಿರದಿಂದ ಉಂಗುರವನ್ನು ತೆಗೆದುಕೊಂಡನು.

ತಕ್ಷಣ ಉರಿಯುವ ಕೆಂಡವನ್ನು ಮುಟ್ಟಿದಂತೆ ಬೆಚ್ಚಿಬಿದ್ದನು. ಉಂಗುರದ ಒಂದು ಕಡೆಯಲ್ಲಿ ಆನೆಯ ದಂತದ ಮೇಲೆ ಚಿತ್ರಿಸಿದ್ದ ಒಬ್ಬ ಯುವಕನ ಕಿರು ಚಿತ್ರವೂ ಮತ್ತೊಂದು ಕಡೆ—'ವಿನೋದ ಚಂದ್ರ' ಎಂಬ ಅಕ್ಷರಗಳೂ ಕೆತ್ತಲ್ಪಟ್ಟಿದ್ದುವು.

ಆಗ ಮೋಹಿತನು ಉಂಗುರದಿಂದ ದೃಷ್ಟಿಯನ್ನೆತ್ತಿ ಒಮ್ಮೆ ಕ್ಷಿರೋದೆಯ ಮುಖದೆಡೆಗೆ ದೃಷ್ಟಿಯನ್ನಿಟ್ಟು ನೋಡಿದನು. ಇಪ್ಪತ್ತುನಾಲ್ಕು ವರ್ಷಗಳ ಹಿಂದಿನ ಮತ್ತೊಂದು ಅಶ್ರು ಸಜಲ ಪ್ರೀತಿಸುಕೋಮಲ ಸಲಜ್ಜ ಶಂಕಿತ ಮುಖದ ನೆನಪಾಯಿತು. ಆ ಮುಖಕ್ಕೂ ಇದಕ್ಕೂ ಹೋಲಿಕೆಯಿತ್ತು.

ಮೋಹಿತನು ಮತ್ತೊಮ್ಮೆ ಉಂಗುರವನ್ನು ನೋಡಿದ ನಂತರ ಮೆಲ್ಲ ಮೆಲ್ಲಗೆ ಮುಖವನ್ನೆತ್ತಿದಾಗ, ಆಗ ಅವನಿದಿರಿನಲ್ಲಿ ಕಲಂಕಿನಿ, ಪತಿತಾ ರಮಣಿಯು ಒಂದು ಸಾಮಾನ್ಯ ಚಿನ್ನದ ಉಂಗುರದ ಉಜ್ವಲ ಪ್ರಭೆಯಲ್ಲಿ ಸ್ವರ್ಣಮಯೀ ದೇವಿಯ ಪ್ರತಿಮೆಯಂತೆ ಪ್ರಕಾಶಿಸುತ್ತಿದ್ದಳು.

———:———

## ಶಾಸ್ತ್ರಿ

## ಪ್ರಥಮ ಪರಿಚ್ಛೇದ

ದುಃಖೀರಾಮ ಮತ್ತು ಛಿದಾಮ ಇವರಿಬ್ಬರು ಸೋದರರೂ ಮುಂಜಾನೆ ಕುಡುಗೋಲನ್ನು ಎತ್ತಿಕೊಂಡು ಆಳುಗಳಿಂದ ಕೆಲಸ ಮಾಡಿಸಲು ಹೊರಕ್ಕೆ ಹೊರಟಾಗ ಅವರ ಇಬ್ಬರು ಹೆಂಡತಿಯರಲ್ಲಿ ಕೂಗಾಟ—ಬಯ್ದ್ಯಾಟವು ನಡೆಯುತ್ತಿತ್ತು. ಆದರೆ ಪ್ರಕೃತಿಯ ಇತರ ಹಲವು ವಿಧದ ಕಲರವದಂತೆ ಈ ಕಲಹ—ಕೋಲಾಹಲವೂ ಕೇರಿಯ ಜನರಿಗೆಲ್ಲಾ ಅಭ್ಯಾಸವಾಗಿಬಿಟ್ಟಿತ್ತು. ಬಲವಾದ ಕಂಠಸ್ವರ ಕೇಳಿದಕೂಡಲೆ ಜನರು—ಅದೋ ಆರಂಭವಾಯಿತು—ಎಂದು ಒಬ್ಬರೊಡನೊಬ್ಬರು ಹೇಳುತ್ತಿದ್ದರು. ಅಂದರೆ ಯಾವ ರೀತಿಯಲ್ಲಿ ನಿರೀಕ್ಷಣೆ ಮಾಡಬಹುದೋ ಸರಿಯಾಗಿ ಹಾಗೆಯೇ ನಡೆದಿದೆ. ಇಂದೂ ಸ್ವಭಾವ ನಿಯಮದಲ್ಲಿ ಯಾವ ವಿಧವಾದ ಬದಲಾವಣೆಯೂ ಆಗಿಲ್ಲ. ಬೆಳಗ್ಗೆ ಸೂರ್ಯನು ಪೂರ್ವ ದಿಕ್ಕಿನಲ್ಲಿ ಹುಟ್ಟಿದರೆ ಹೇಗೆ ಯಾರೂ ಅದಕ್ಕೆ ಕಾರಣವನ್ನು ವಿಚಾರಿಸರೋ ಹಾಗೆಯೇ ಈ ಜಗಳ ಗಂಟರ ಮನೆಯಲ್ಲಿನ ಹೆಂಗಸರಿಬ್ಬರ ನಡುವೆ ಹಾ—ಹೂ ಎಂದು ಕೂಗಾಟವು ಆರಂಭವಾದಾಗ ಅದರ ಕಾರಣವನ್ನು ತೀರ್ಮಾನಿಸುವುದಕ್ಕಾಗಿ ಯಾರೂ ಯಾವ ವಿಧವಾದ ಕುತೂಹಲವನ್ನೂ ಪ್ರಕಟಿಸರು.

ವಾಸ್ತವ್ಯದಲ್ಲಿ ಈ ಕೂಗಾಟ—ಚೀರಾಟವು ನೆರೆಹೊರೆಯವರಿಗಿಂತ ಹೆಚ್ಚಾಗಿ ಇಬ್ಬರ ಗಂಡಂದಿರನ್ನು ಮುಟ್ಟುತ್ತಿದ್ದಿತೆನ್ನಲು ಸಂದೇಹವಿಲ್ಲ. ಆದರೆ ಅವರುಗಳು ಅದನ್ನು ಒಂದು ಹಿಂಸೆಯೆಂದು ಭಾವಿಸುತ್ತಿರಲಿಲ್ಲ. ಅವರಿಬ್ಬರು ಸೋದರರೂ ದೀರ್ಘ ಸಂಸಾರ ಪಥವನ್ನು ಒಂದು ಎಕ್ಕಾಗಾಡಿಯಂತೆ* ನಡೆಸುತ್ತ ಬಂದಿದ್ದರು. ಸ್ಪ್ರಿಂಗ್ ಇಲ್ಲದೆ ಇಕ್ಕೆಲದ ಎರಡು ಚಕ್ರಗಳು ಮಾಡುವ ವಿಶ್ರಾಂತಿಯಿಲ್ಲದೆ ಛಡ-ಛಡ್-ಖಟ-ಖಟ್ ಶಬ್ದವನ್ನು ಜೀವನ ರಥಯಾತ್ರೆಯ ಒಂದು ವಿಧಿವಿಹಿತ ನಿಯಮದ ನಡುವಣ ಶಬ್ದವೆಂದು ಲೆಖ್ಖಿಸಿರುವರು.

---

*** ಎಕ್ಕಾ–ಉತ್ತರ ದೇಶದಲ್ಲಿ ಬಹುಕಾಲದಿಂದ ಬಳಕೆಯುಲ್ಲಿರುವ ತೇರಿನ ಆಕಾರದ ಒಂಟಿ ಕುದುರೆ ಗಾಡಿ.**

ಅಲ್ಲದೆ ಎಂದು ಮನೆಯಲ್ಲಿ ಯಾವ ಶಬ್ದವೂ ಇಲ್ಲದೇ ಹೋಗಿ ಎಲ್ಲವೂ ನಿಶ್ಯಬ್ದವಾಗಿ ಬಿಕೋ ಎಂದಿರುವುದೋ ಅಂದು ಯಾವುದೋ ಅನೈಸರ್ಗಿಕ ಉಪದ್ರವದ ಶಂಕೆಯು ತಲೆಹಾಕುತ್ತಿತ್ತು. ಆ ದಿನ ಯಾವ ವೇಳೆಯಲ್ಲಿ ಏನಾಗುವುದೋ ಎಂಬುದನ್ನೂ ಯಾರೂ ನಿರ್ಣಯಿಸಿ ಹೇಳಲು ಸಾಧ್ಯವಿರುತ್ತಿರಲಿಲ್ಲ.

ನಮ್ಮ ಕಥೆಯ ಘಟನೆಯು ಎಂದು ಆರಂಭವಾಯಿತೋ ಅಂದು ಸಂಜೆಯ ನಂತರ ಇಬ್ಬರು ಸೋದರರೂ ಆಳುಗಳಿಂದ ಕೆಲಸಮಾಡಿಸಿ ದಣಿದ ನ್ಯೆಯೊಡನೆ ಮನೆಗೆ ಹಿಂದಿರಿಗಿ ಬಂದಾಗ ನಿಶ್ಯಬ್ದವಾದ ಮನೆಯು ನೀರವವಾಗಿ ದುಮ ದುಮ ಎನ್ನುತ್ತಿದ್ದುದನ್ನು ಕಂಡರು.

ಹೊರಗೂ ಅತ್ಯಂತ ನಿಶ್ಯಬ್ದ. ಮಧ್ಯಾಹ್ನದ ಸಮಯದಲ್ಲಿ ಬಲವಾಗಿ ಒಂದು ಹದ ಮಳೆಯಾಗಿತ್ತು. ಇನ್ನೂ ನಾಲ್ಕು ಕಡೆಯೂ ಮೇಘವು ಆವರಿಸಿಕೊಂಡೇ ಇದೆ. ಗಾಳಿಯ ಸುಳಿವೇ ಇಲ್ಲ. ಮಳೆಯಿಂದ ಮನೆಯ ನಾಲ್ಕು ಕಡೆಯ ಪೊದೆಗಳು ಮತ್ತು ಗಿಡ ಗೆಂಟೆಗಳು ಪುಷ್ಕಳವಾಗಿ ಬೆಳೆದಿವೆ. ಅಲ್ಲಿಂದಲೂ ನೀರಿನಲ್ಲಿ ಮುಳುಗಿರುವ ಸೆಣಬಿನ ಹೊಲದಿಂದಲೂ ನೆನದ ಉದ್ಭಿಜಗಳ ಘನಗಂದದಿಂದ ತುಂಬಿದ ಗಾಳಿಯು ನಾಲ್ಕು ಕಡೆಯೂ ಒಂದು ಶಾಶ್ವತ ಗೋಡೆಯಂತೆ ಒಟ್ಟುಗೂಡಿ ನಿಂತಿದೆ. ದನದ ಕೊಟ್ಟಿಗೆಯ ಹಿಂದಿರುವ ಹಳ್ಳದೊಳಗಿನಿಂದ ಕಪ್ಪೆಗಳು ವಟಗುಟ್ಟುತ್ತಿವೆ ಮತ್ತು ಜೀರುಂಡೆಗಳ ಶಬ್ದದಿಂದ ಸಂಜೆಯ ನಿಶ್ಯಬ್ದ ಆಕಾಶವು ಸಂಪೂರ್ಣವಾಗಿ ತುಂಬಿ ಹೋಗಿದೆ.

ಸಮೀಪದಲ್ಲೇ ಮಳೆಗಾಲದ ಪದ್ಮಾನದಿಯು ಹೊಸ ಮೋಡದ ನೆರಳಲ್ಲಿ ಭಾರಿ ಸ್ಥಿರ ಭಯಂಕರ ಭಾವವನ್ನು ಧರಿಸಿಕೊಂಡು ಹರಿಯುತ್ತಿದೆ. ಪೈರು ಪಚ್ಚೆಗಳಲ್ಲಿ ಬಹು ಭಾಗವು ಕೊಚ್ಚಿಕೊಂಡು ಜನರ ವಾಸಸ್ಥಳಕ್ಕೆ ಸಮೀಪದಲ್ಲಿ ಬಂದು ನಿಂತಿದೆ. ಅಷ್ಟೇ ಅಲ್ಲ. ಪ್ರವಾಹದ ದಾರಿಯಲ್ಲಿ ನಾಲ್ಕಾರು ಮಾವು—ಹಲಸುಗಳ ರೆಂಬೆಗಳು ಹೊರಕ್ಕೆದ್ದು ಕಾಣುತ್ತಿವೆ. ಅವುಗಳ ನಿರುಪಾಯ ಮುಷ್ಟಿಗಳಿಂದ ನೀಡಿದ ಬೆರಳುಗಳು ಶೂನ್ಯದಲ್ಲಿ ಯಾವುದನ್ನಾದರೂ ಕೊನೆಯ ಅವಲಂಬನವನ್ನು ಅಪ್ಪಿ ಹಿಡಿದುಕೊಳ್ಳಲು ಯತ್ನಿಸುತ್ತಿರುವಂತೆ ಕಾಣುತ್ತಿವೆ.

ದುಃಖಿರಾಮನೂ ಛಿದಾಮನೂ ಅಂದು ಜಮೀನುದಾರರ ಕಛೇರಿ ಮನೆಯಲ್ಲಿ ಕೆಲಸ ಮಾಡಲು ಹೋಗಿದ್ದರು. ಆಚೆ ದಡದ ಗದ್ದೆಯಲ್ಲಿ— ಭತ್ತವು ಹಣ್ಣಾಗಿ ಕುಯ್ಲಿಗೆ ಬಂದಿತ್ತು. ಮಳೆಯ ಪ್ರವಾಹವು ಅದನ್ನು ಕೊಚ್ಚಿಕೊಂಡು ಹೋಗುವ ಮುಂಚೆಯೇ ಕೊಯ್ದು ಸಂಗ್ರಹಿಸುವುದಕ್ಕಾಗಿ ದೇಶದ ಬಡಪಾಯಿಗಳಲ್ಲಿ ಕೆಲವರು ತಮ್ಮ ಗದ್ದೆಯಲ್ಲೂ ಆಳುಗಳು ಬಂದು ಈ ಅಣ್ಣ ತಮ್ಮಂದಿರನ್ನು ಬಲಾತ್ಕಾರವಾಗಿ ಹಿಡಿದುಕೊಂಡು ಹೋಗಿದ್ದರು. ಕಛೇರಿ ಮನೆಯ ತಾರಸಿಯನ್ನು ಭೇದಿಸಿಕೊಂಡು ಅಲ್ಲಲ್ಲಿ ನೀರು ಸೋರುತ್ತಿತ್ತು. ಅದನ್ನು ಸರಿಪಡಿಸಿ ಸಣ್ಣ ಪುಟ್ಟ ಕೆಲಸಗಳನ್ನು ಮುಗಿಸಿ ಬರುವುದರಲ್ಲಿ ದಿನವು ಕಳೆಯಿತು. ಕಛೇರಿಯಲ್ಲೆ ಸ್ವಲ್ಪ ತಿಂಡಿ ಸಿಕ್ಕಿತ್ತು. ನಡುವೆ ನಡುವೆ ಮಳೆಯಲ್ಲಿ ನೆನೆದಿದ್ದರು. ನ್ಯಾಯವಾದ ಕೂಲಿಯೂ ಸಿಕ್ಕಿರಲಿಲ್ಲ. ಅದಕ್ಕೆ ಬದಲಾಗಿ ಎಷ್ಟೊಂದು ನ್ಯಾಯವಾದ ಕಟುವಚನಗಳನ್ನು ಕೇಳಿದ್ದರೋ ಅದು ಅವರ ಲಭ್ಯಕ್ಕಿಂತ ಬಲು ಹೆಚ್ಚಾಗಿತ್ತು.

ದಾರಿಯ ಕೆಸರು ಮತ್ತು ನೀರನ್ನೆಲ್ಲಾ ತುಳಿದುಕೊಂಡು ಸಂಜೆಯ ಹೊತ್ತಿಗೆ ಅಣ್ಣತಮ್ಮಂದಿರಿಬ್ಬರೂ ಮನೆಗೆ ಹಿಂದಿರುಗಿದಾಗ ಚಿಕ್ಕವನ ಹೆಂಡತಿ ಚಂದಿರೆ ನೆಲದಮೇಲೆ ಸೆರಗನ್ನು ಹಾಸಿಕೊಂಡು ಮಲಗಿದ್ದುದನ್ನು ಕಂಡರು— ಅಂದಿನ ಆ ಮೋಡಕವಿದ ದಿನದ ಹಾಗೆಯೇ ಅವಳೂ ಮಧ್ಯಾಹ್ನವೆಲ್ಲಾ ಅಪಾರವಾಗಿ ಕಣ್ಣೀರ ಮಳೆ ಸುರಿಸಿ ಸಂಜೆಯ ಹೊತ್ತಿಗೆ ಶಾಂತಳಾಗಿ ಅತಿ ನೆಮ್ಮದಿಯಾಗಿ ಕುಳಿತಿದ್ದಳು. ಹಿರಿಯವನ ಹೆಂಡತಿಯೂ ಮುಖ ದಪ್ಪಗೆ ಮಾಡಿಕೊಂಡು ಜಗಲಿಯ ಮೇಲೆ ಕುಳಿತಿದ್ದಳು—ಅವಳ ವರ್ಷೂವರೆಯ ಮಗು ಅಳುತ್ತಿತ್ತು. ಅಣ್ಣತಮ್ಮಂದಿರು ಮನೆಯೊಳಕ್ಕೆ ಬಂದಾಗ ಬೆತ್ತಲೇ ಮಗುವು ಒಂದುಕಡೆ ಅಂಗತ್ತಲಾಗಿ ಬಿದ್ದುಕೊಂಡು ನಿದ್ದೆ ಮಾಡುತ್ತಿದ್ದುದನ್ನು ನೋಡಿದರು.

ಹಸಿದ ದುಃಖೀರಾಮನು ಕಾಲವಿಳಂಬ ಮಾಡದೆ 'ಅನ್ನ ಹಾಕು' ಎಂದನು.

ಹಿರಿಯವಳು ಮದ್ದಿನ ಚೀಲಕ್ಕೆ ಬೆಂಕಿ ತಗಲಿದಂತೆ ಕ್ಷಣಮಾತ್ರದಲ್ಲಿ ತೀವ್ರ ಕಂಠಸ್ವರವನ್ನು ಆಕಾಶಕ್ಕೆ ಏರಿಸಿ — ''ಅನ್ನ ಹಾಕಲು ಅನ್ನ

ಎಲ್ಲಿದೆ — ನೀನೇನು ತಂದು ಇಟ್ಟಿದ್ದೀಯೋ. ನಾನು ಹೋಗಿ ದುಡಿದು ತರಬೇಕಾಗಿತ್ತೇನು ?" ಎಂದಳು.

ಸಂಪೂರ್ಣ ದಿನವೆಲ್ಲಾ ದುಡಿದ ದಣುವು ಮತ್ತು ಬೈಗಳನಂತರ ಅನ್ನವಿಲ್ಲದ ನಿರಾನಂದ ಅಂಧಕಾರ ಗೃಹದಲ್ಲಿ ಉರಿಯುವ ಹೊಟ್ಟೆ ಹಸಿವಿನಲ್ಲಿ ಹೆಂಡತಿಯ ಕೋಪದ ಮಾತುಗಳು; ಮುಖ್ಯವಾಗಿ ಮಾತಿನಲ್ಲಿ ಅಡಗಿದ್ದ ಕುತ್ಸಿತ ಕುಚೇಷ್ಟೆಯು ದುಃಖೀರಾಮನಿಗೆ ಹಠಾತ್ತಾಗಿ ಸಂಪೂರ್ಣ ಅಸಹ್ಯ ವಾಯಿತು.

ಮುನಿದ ಹುಲಿಯಂತೆ ಗಂಭೀರ ಘರ್ಜನೆಯೊಡನೆ 'ಏನಂದೆ', ಎಂದು ಕೂಗುಹಾಕಿ ಕ್ಷಣಮಾತ್ರದಲ್ಲಿ ಹಿಂದು ಮುಂದು ನೋಡದೆ ಕೈಯಲ್ಲಿದ್ದ ಮಚ್ಚನ್ನು ಹೆಂಡತಿಯ ತಲೆಯ ಮೇಲೆ ಬೀಸಿದನು. ರಾಧೆಯು ತನ್ನ ಓರಗಿತ್ತಿಯ ತೊಡೆಯ ಬಳಿ ಬಿದ್ದು ಎನೆಯಿಕ್ಕುವುದರಲ್ಲಿ ಪ್ರಾಣಬಿಟ್ಟಳು.

ಚಂದಿರೆಯು ರಕ್ತದಿಂದ ತೋಯ್ದ ಬಟ್ಟೆಯೊಡನೆ 'ಅಯ್ಯೋ—ಏನಾಯಿ ತಪ್ಪೋ' ಎಂದು ಚೀತ್ಕಾರ ಮಾಡುತ್ತಾ ಎದ್ದಳು. ಛಿದಾಮನು ಅವಳ ಬಾಯನ್ನು ಬಲವಾಗಿ ಮುಚ್ಚಿ ಹಿಡಿದುಕೊಂಡನು. ದುಃಖೀರಾಮನು ಮಚ್ಚನ್ನು ಎಸೆದು ತಲೆಯಮೇಲೆ ಕೈಯಿಟ್ಟುಕೊಂಡು ನೆಲದಮೇಲೆ ಕುಳಿತುಕೊಂಡನು. ಮಗುವು ಎಚ್ಚತ್ತು ಹೆದರಿಕೆಯಿಂದ ಚೀತ್ಕಾರಮಾಡುತ್ತಾ ಅಳತೊಡಗಿತು.

ಆ ವೇಳೆಯಲ್ಲಿ ಹೊರಗಡೆ ಪರಿಪೂರ್ಣ ಶಾಂತಿಯು ನೆಲಸಿತ್ತು. ದನ ಕಾಯುವ ಹುಡುಗರು ದನಗಳನ್ನು ಅಟ್ಟಿಕೊಂಡು ಹಳ್ಳಿಗೆ ಹಿಂತಿರುಗಿ ಬರುತ್ತಿದ್ದರು. ಆಚೆಯ ದಡದ ಗದ್ದೆಗಳಲ್ಲಿ ಹೊಸದಾಗಿ ಹದನಾಗಿದ್ದ ಭತ್ತದ ಕುಯ್ಲಿಗೆ ಹೋಗಿದ್ದವರು ಏಳೆಂಟು ಜನಗಳು ಗುಂಪಾಗಿ ದುಡಿತದ ಬದಲಾಗಿ ದೊರೆತ ಮೂರು ನಾಲ್ಕು ಹೊರೆ ಭತ್ತವನ್ನು ತಲೆಯಮೇಲೆ ಹೊತ್ತುಕೊಂಡು ಸಣ್ಣ ಸಣ್ಣ ದೋಣಿಗಳಲ್ಲಿ ಈಚೆ ದಡಕ್ಕೆ ತಮ್ಮ ತಮ್ಮ ಮನೆಗೆ ಹಿಂತಿರುಗುತ್ತಿದ್ದರು.

ಚಕ್ರವರ್ತಿಗಳ ಮನೆಯ ರಾಮಲೋಚನ ಕಕ್ಕನು ಊರಿನ ಟಪಾಲಿನ ಪೆಟ್ಟಿಗೆಗೆ ಕಾಗದವನ್ನು ಹಾಕಿ ಮನೆಗೆ ಹಿಂತಿರುಗಿ ನಿಶ್ಚಿಂತ ಮನಸ್ಸಿನಿಂದ ತಂಬಾಕನ್ನು ಸೇದುತ್ತಿದ್ದನು. ಅಕಸ್ಮಾತ್ತಾಗಿ ಅವನ ಗುತ್ತಿಗೆದಾರ ದುಃಖೀ ರಾಮನಿಂದ ಅಪಾರ ಹಣವು ಬರಬೇಕಾಗಿದೆಯೆಂಬುದು ನೆನಪಾಯಿತು.

ಇಂದು ಸ್ವಲ್ಪ ಭಾಗವನ್ನು ತೀರಿಸುವುದಾಗಿ ಮಾತುಕೊಟ್ಟಿದ್ದನು. ಇಷ್ಟು ಹೊತ್ತಿಗೆ ಅವನು ಮನೆಗೆ ಹಿಂತಿರುಗಿ ಬಂದಿರಬೇಕೆಂದು ನಿಶ್ಚಯಿಸಿ ಹೆಗಲ ಮೇಲೆ ವಸ್ತ್ರವನ್ನು ಹಾಕಿಕೊಂಡು ಕೊಡೆಯನ್ನು ಹಿಡಿದು ಹೊರಟನು.

ಜಗಳಗಂಟಿಗರ ಮನೆಯೊಳಕ್ಕೆ ಹೋದಾಗ ಅವನ ಮೈಯಲ್ಲಾ ಬೆವರ ತೊಡಗಿತು. ಕತ್ತಲೆ ಕವಿದ ಜಗುಲಿಯ ಬಳಿ ಮೂರು ನಾಲ್ಕು ಕಪ್ಪುಮೂರ್ತಿ ಗಳು ಅಸ್ಪಷ್ಟವಾಗಿ ಕಾಣಿಸುತ್ತಿದ್ದರು. ಮೂಲೆಯೊಂದರಿಂದ ತಡೆದು ತಡೆದು ಹೊರಡುತ್ತಿದ್ದ ಒಂದು ಅಸ್ಪಷ್ಟ ರೋದನಧ್ವನಿಯು ಕೇಳಿಸುತ್ತಿತ್ತು– ಮಗುವು ಅಡಿಗಡಿಗೆ ಅಮ್ಮಾ—ಅಮ್ಮಾ ಎಂದು ಅಳಲು ಯತ್ನಿಸಿದಾಗಲೆಲ್ಲಾ ಛಿದಾಮನು ಅದರ ಬಾಯನ್ನು ಮುಚ್ಚುತ್ತಿದ್ದನು. ರಾಮಲೋಚನನು ಸ್ವಲ್ಪ ಹೆದರಿ "ದುಃಖೀ ಇದ್ದಿಯೇನೋ ?" ಎಂದು ಪ್ರಶ್ನಿಸಿದನು.

ದುಃಖಿಯು ಇಷ್ಟು ಹೊತ್ತು ಕಲ್ಲಿನ ಬೊಂಬೆಯಂತೆ ನಿಶ್ಚಲವಾಗಿ ಕುಳಿತಿದ್ದವನು, ಅವನ ಹೆಸರು ಹಿಡಿದು ಕೂಗಿದೊಡನೆಯೇ ಸಂಪೂರ್ಣವಾಗಿ ಅರಿಯದ ಮಗುವಿನಂತೆ ಗಟ್ಟಿಯಾಗಿ ಅಳತೊಡಗಿದನು.

ಛಿದಾಮನು ಅವಸರ ಅವಸರವಾಗಿ ಜಗುಲಿಯಿಂದ ಇಳಿದು ಚಕ್ರವರ್ತಿ ಗಳ ಬಳಿಗೆ ಬಂದನು. ಚಕ್ರವರ್ತಿಯು "ಹೆಂಗಸರು ಜಗಳವಾಡಿ ಕುಳಿತಿರುವ ರೆಂದು ಕಾಣಿಸುತ್ತೆ. ಇವತ್ತು ಹಗಲೆಲ್ಲಾ ಕೂಗಾಟವು ಕೇಳಿಸುತ್ತಲೇ ಇತ್ತು" ಎಂದನು.

ಇದುವರೆಗೆ ಛಿದಾಮನಿಗೆ ಏನು ಮಾಡಬೇಕೆಂಬುದೇ ಹೊಳೆದಿರಲಿಲ್ಲ. ಹಲವು ಅಸಂಭವ ಮಾತುಗಳು ಅವನ ತಲೆಯಲ್ಲಿ ಮೂಡಿದ್ದುವು. ಅಂತೂ ರಾತ್ರಿ ಸ್ವಲ್ಪ ಕಳೆದನಂತರ ಹೆಣವನ್ನು ಎಲ್ಲಿಯಾದರೂ ಸಾಗಿಸಿಬಿಡಬೇಕೆಂದು ನಿಶ್ಚಯಿಸಿದ್ದನು. ಈ ನಡುವೆ ಚಕ್ರವರ್ತಿಯು ಬಂದು ನಿಲ್ಲುವನೆಂಬುದು ಅವನು ಯೋಚಿಸದಿದ್ದ ಸಂಗತಿ. ಥಟ್ಟನೆ ಏನು ಉತ್ತರ ಕೊಡಬೇಕೆಂಬುದು ಹೊಳೆಯಲೇ ಇಲ್ಲ. "ಹೌದು, ಇವತ್ತು ಬಲವಾಗಿ ಜಗಳವಾಯಿತು—" ಎಂದು ಹೇಳಿಬಿಟ್ಟನು.

ಚಕ್ರವರ್ತಿಯು ಜಗಲಿಯಕಡೆಗೆ ಮುಂದುವರಿಯುತ್ತ 'ಆದರೆ ಅದಕ್ಕಾಗಿ ದುಃಖೀ ಯಾತಕ್ಕೆ ಅಳುತ್ತಾನೋ' ಎಂದನು.

ಇನ್ನು ತಪ್ಪಿಸಿಕೊಳ್ಳಲು ಮಾರ್ಗವೇ ಇಲ್ಲವೆಂದು ಕಂಡು ಛಿದಾಮನು ಥಟ್ಟನೆ—ಜಗಳವಾಡುತ್ತ ಚಿಕ್ಕವಳು ಹಿರಿಯುವಳ ತಲೆಯಮೇಲೆ ಮಚ್ಚಿನಿಂದ ಒಂದೇಟನ್ನು ಹಾಕಿಬಿಟ್ಟಳು ಎಂದನು.

ಎದುರಿನಲ್ಲಿರುವ ಆಪತ್ತಲ್ಲದೆ ಮತ್ತಾವುದಾದರೂ ಆಪತ್ತು ಒದಗಲು ಸಾಧ್ಯವಿದೆಯೆಂಬ ಸಂಗತಿಯು ಸಹಜವಾಗಿಯಾಗಿ ಯಾರಿಗೂ ನೆನಪಾಗದು. ಛಿದಾಮನು ಆಗ ಭೀಷಣ ಸತ್ಯದಿಂದ ಹೇಗೆ ತಪ್ಪಿಸಿಕೊಳ್ಳುವುದೆಂಬುದನ್ನು ಯೋಚಿಸುತ್ತಿದ್ದನು. ಮಿಥ್ಯೆಯು ಅದಕ್ಕಿಂತಲೂ ಭೀಷಣವಾಗಬಹುದೆಂಬುದರ ಜ್ಞಾನವೇ ಆಗ ಅವನಿಗೆ ಹೊಳೆಯಲಿಲ್ಲ. ರಾಮಲೋಚನನ ಪ್ರಶ್ನೆಯನ್ನು ಕೇಳಿದ ಕೂಡಲೆ ಅವನ ತಲೆಯಲ್ಲಿ ಮೊದಲು ಹೊಳೆದ ಉತ್ತರವನ್ನು ಹೇಳಿಬಿಟ್ಟನು.

ರಾಮಲೋಚನನು ಘಾಬರಿಬಿದ್ದು—'ಆಂ ಏನಂದೆ! ಸತ್ತಿಲ್ಲ ತಾನೇ' ಎಂದನು. ಛಿದಾಮನು 'ಸತ್ತುಹೋದಳು' ಎಂದು ಹೇಳಿ ಚಕ್ರವರ್ತಿಯ ಕಾಲುಗಳನ್ನು ಬಿಗಿಯಾಗಿ ಹಿಡಿದುಕೊಂಡನು.

ಚಕ್ರವರ್ತಿಗೆ ಪಲಾಯನಮಾಡಲು ಮಾರ್ಗವಿಲ್ಲದೆ ಹೋಯಿತು. ರಾಮ—ರಾಮ—ಸಂಜೆಯ ಹೊತ್ತಿನಲ್ಲಿ ಇದೆಂತಹ ಆಪತ್ತಿನಲ್ಲಿ ಸಿಕ್ಕಿಬಿದ್ದೆನಪ್ಪಾ—ಕೋರ್ಟಿನಲ್ಲಿ ಸಾಕ್ಷಿಹೇಳಿ ಪೂರೈಸುವುದರೊಳಗೆ ಜೀವವು ಕುತ್ತಿಗೆ ಬರುವುದಲ್ಲಾ—ಎಂದು ಯೋಚಿಸತೊಡಗಿದನು—ಛಿದಾಮನು ಅವನ ಕಾಲನ್ನು ಬಿಡಲೇ ಇಲ್ಲ.

ನಮ್ಮಪ್ಪಾ—"ನನ್ನ ಹೆಂಡತಿಯನ್ನು ಉಳಿಸೋ ದಾರೀ ತೋರಿಸೀಪ್ಪಾ" ಎಂದು ಹೇಳುತ್ತಾ ಅವನ ಕಾಲುಗಳನ್ನು ಹಿಡಿದುಕೊಂಡೇ ಇದ್ದನು.

ವ್ಯಾಜ್ಯ ವ್ಯವಹಾರಗಳಲ್ಲಿ ಸಲಹೆ ಹೇಳುವುದರಲ್ಲಿ ರಾಮಲೋಚನನು ಗ್ರಾಮದಲ್ಲಿ ಖದೀಮ. ಅವನು ಸ್ವಲ್ಪಹೊತ್ತು ಆಲೋಚಿಸಿ "ನೋಡು ಇದಕ್ಕೊಂದು ಉಪಾಯವಿದೆ. ನೀನು ಈಗಲೇ ಠಾಣೆಗೆ ಹೋಗಿ—ನಿಮ್ಮ ಅಣ್ಣನು ಸಂಜೆಯ ಹೊತ್ತಿನಲ್ಲಿ ಮನೆಗೆಬಂದು ಅನ್ನಹಾಕ ಹೇಳಿದನು. ಅನ್ನವು ಸಿದ್ಧವಾಗಿರದಿರಲು ಹೆಂಡತಿಯ ತಲೆಯಮೇಲೆ ಮಚ್ಚಿನಿಂದ ಒಂದೇಟು ಹೊಡೆದನು"—ಎಂದು ಹೇಳಿಬಿಡು. ಹೀಗೆ ಹೇಳಿದರೆ ಹುಡುಗಿಯು ಉಳಿದು

ಕೊಳ್ಳುವಳು—ಛಿದಾಮನ ಗಂಟಲು ಒಣಗಿಹೋಯಿತು. ಎದ್ದು ನಿಂತವನು 'ಸ್ವಾಮಿ—ಹೆಂಡತಿಹೋದರೆ ಹೆಂಡತಿ ಸಿಕ್ಕುವಳು. ಆದರೆ ನಮ್ಮ ಅಣ್ಣ ಹೋದರೆ ಇನ್ನೊಬ್ಬ ಅಣ್ಣ ಸಿಕ್ಕನಲ್ಲ' ಎಂದು ಹೇಳಿದನು. ಆದರೆ ತನ್ನ ಹೆಂಡತಿಯ ಹೆಸರಿನಲ್ಲಿ ದೋಷಾರೋಪಣೆ ಮಾಡಿದಾಗ ಇವೆಲ್ಲ ವಿಷಯಗಳನ್ನೂ ಯೋಚಿಸಲಿಲ್ಲ. ಅವಸರದಲ್ಲಿ ಒಂದು ಕೆಲಸವನ್ನು ಮಾಡಿಬಿಟ್ಟನು. ಈ ಅಲಕ್ಷ್ಯಭಾವದಿಂದ ಮನಸ್ಸು ತನ್ನಕಡೆಯ ಯುಕ್ತಿ ಮತ್ತು ತಿಳುವಳಿಕೆಯನ್ನು ಸಂಗ್ರಹಿಸುತ್ತಿತ್ತು.

ಚಕ್ರವರ್ತಿಯೂ ಮಾತು ನ್ಯಾಯವಾದದ್ದೆಂದು ಅರಿತು—ಹಾಗಾದರೆ ನಡೆದದ್ದನ್ನು ನಡೆದಂತೆ ಹೇಳಿಬಿಡು—ಎಲ್ಲ ದಿಕ್ಕಿನಲ್ಲೂ ರಕ್ಷಣೆಮಾಡಲು ಮಾರ್ಗವಿಲ್ಲ—ಎಂದನು.

ಹಾಗೆ ಹೇಳಿ ರಾಮಲೋಚನನು ಅಲ್ಲಿ ನಿಲ್ಲದೆ ವೇಗವಾಗಿ ಹೊರಟು ಹೋದನು. ಕ್ಷಣಹೊತ್ತಿನಲ್ಲಿ ಜಗಳಗಂಟಿಗರ ಮನೆಯ ಚಂದಿರೆಯು ಕಾದಾಡಿ ತನ್ನ ಓರಗಿತ್ತಿಯ ತಲೆಯಲ್ಲಿ ಮಚ್ಚನ್ನು ಇಟ್ಟಳೆಂಬ ಸುದ್ದಿಯು ಊರೆಲ್ಲಾ ಹರಡಿತು.

ಕಟ್ಟೆಯೊಡೆದರೆ ಹೇಗೆ ನೀರು ನುಗ್ಗುವುದೋ ಹಾಗೆ ಗ್ರಾಮದ ನಡುವೆ ಹುಂಕಾರದೊಡನೆ ಪೋಲೀಸರು ಬಂದು ತಲಪಿದರು; ಅಪರಾಧಿಯೂ ನಿರಪರಾಧಿಯೂ ಎಲ್ಲರೂ ಬಹು ಉದ್ವಿಗ್ನರಾದರು.

## ಎರಡನೆಯ ಪರಿಚ್ಛೇದ

ಯಾವ ದಾರಿಯಲ್ಲಿ ಹೆಜ್ಜೆ ಹಾಕಿರುವೆನೋ ಅದರಲ್ಲೇ ಮುಂದುವರಿಯ ಬೇಕೆಂದು ಛಿದಾಮನು ನಿಶ್ಚಯಿಸಿದನು. ಅವನು ಚಕ್ರವರ್ತಿಯ ಹತ್ತಿರ ತನ್ನ ಬಾಯಿಂದಲೇ ಒಂದು ಕಥೆಯನ್ನು ಹೇಳಿದ್ದನು. ಅದು ಊರೆಲ್ಲಾ ಹರಡಿ ಹೋಗಿತ್ತು. ಈಗ ಮತ್ತೊಂದು ಏನಾದರೂ ಹೇಳಿದರೆ ಕೊನೆಗೆ ಏನಾಗು ವುದೋ ಎಂಬುದು ಅವನಿಗೆ ಹೊಳೆಯಲಿಲ್ಲ. ತಾನು ಮುಂಚೆ ಹೇಳಿದ್ದನ್ನೇ ಸಾಧಿಸಿ ಅದರೊಡನೆ ಇನ್ನೆರಡು ಸಂಗತಿಗಳನ್ನು ಜೋಡಿಸಿ ತನ್ನ ಹೆಂಡತಿಯನ್ನು ಉಳಿಸಿಕೊಳ್ಳುವುದಲ್ಲದೆ ಬೇರೆ ಮಾರ್ಗವಿಲ್ಲವೆಂದು ತೀರ್ಮಾನಿಸಿದನು.

ಛಿದಾಮನು ತನ್ನ ಹೆಂಡತಿಯು ಚಂದಿರೆಯೊಡನೆ ಅಪರಾಧವನ್ನು ಒಪ್ಪಿಕೊಳ್ಳುವಂತೆ ಪ್ರೇರಣೆಮಾಡತೊಡಗಿದನು. ಅವನ ಮಾತುಗಳನ್ನು ಕೇಳಿ ಅವಳಿಗೆ ಸಿಡಿಲು ಬಡಿದಂತಾಯಿತು. ಛಿದಾಮ ಅವಳಿಗೆ ಸಮಾಧಾನ ಹೇಳುತ್ತ—"ಏನು ಹೇಳುವೆಯೋ ಅದರಿಂದ ನಿನಗೇನೂ ಹೆದರಿಕೆಯಿಲ್ಲ. ನಾವುಗಳು ನಿನ್ನನ್ನು ಉಳಿಸಿಕೊಳ್ಳುವೆವು" ಎಂದನು. ಅಂತೂ ಸಮಾಧಾನ ವೇನೋ ಹೇಳುತ್ತಿದ್ದನು. ಆದರೆ ಆ ವೇಳೆಯಲ್ಲಿ ಅವನ ಗಂಟಲು ಒಣಗಿ ಮುಖದಲ್ಲಿ ಬಿಳುಪೇರಿತ್ತು.

ಚಂದಿರೆಯ ವಯಸ್ಸು ಹದಿನೇಳು—ಹದಿನೆಂಟಕ್ಕೆ ಹೆಚ್ಚಿರದು. ಲಕ್ಷಣವಾಗಿ ತುಂಬಿದ ಗುಂಡು ಮುಖ—ಹೆಚ್ಚು ಎತ್ತರವಿಲ್ಲದ ಮೈ—ಗಟ್ಟಿ ಮುಟ್ಟಾಗಿಯೂ ಆರೋಗ್ಯವಾಗಿಯೂ ಬಲವಾಗಿಯೂ ಇದ್ದ ಅಂಗಾಂಗಳಲ್ಲಿ ಹಾಗೆಯೇ ನೆಲಸಿದ್ದ ಸೌಷ್ಠವದಿಂದ ನಡೆಯುವಾಗಲಾಗಲಿ ಅಲುವಾಗ ಲಾಗಲಿ ಅಥವಾ ದೇಹದಲ್ಲಿ ಎಲ್ಲೂ ತೊಂದರೆಯಾಗದು. ಹೊಸದಾಗಿ ತಯಾರಾದ ನೌಕೆಯಂತೆ ಸಣ್ಣಗೆ ಅಂದವಾಗಿ ಅತ್ಯಂತ ಸಹಜವಾದ ಮೈ ಕಟ್ಟಿನವಳಾಗಿದ್ದಳು. ಅವಳ ಮೈಯಲ್ಲಿ ಯಾವ ಕೀಲೂ ಸಡಿಲವಾಗಿರಲಿಲ್ಲ. ಪ್ರಪಂಚದ ಎಲ್ಲ ವಿಷಯಗಳಲ್ಲಿಯೂ ಅವಳಿಗೆ ಕೌತುಕ ಕುತೂಹಲಗಳು ಇದ್ದುವು. ಕೇರಿಯಲ್ಲಿ ಹರಟೆ ಹೊಡೆಯುವುದೆಂದರೆ ಅವಳಿಗೆ ಆನಂದ. ಕಂಕುಳಲ್ಲಿ ಕೊಡವನ್ನಿಟ್ಟುಕೊಂಡು ನೀರು ತರಲು ಓಡಾಡುತ್ತಿದ್ದಾಗ ಎರಡು ಬೆರಳುಗಳಿಂದ ಮುಖದ ಮುಸುಕನ್ನು ಸ್ವಲ್ಪ ಓರೆಮಾಡಿ ಉಜ್ವಲ ಚಂಚಲ ಘನ ಕೃಷ್ಣನೇತ್ರಗಳಿಂದ ದಾರಿಯಲ್ಲಿ ನೋಡ ತಕ್ಕುವುಗಳನ್ನೆಲ್ಲಾ ನೋಡುತ್ತಿದ್ದಳು.

ದೊಡ್ಡವಳ ಸ್ವಭಾವವು ಇದಕ್ಕೆ ಸಂಪೂರ್ಣ ವಿಪರೀತವಾಗಿತ್ತು. ಅತ್ಯಂತ ಅವ್ಯವಸ್ಥೆಯ ಸಡಿಲಬಿದ್ದ ಬೊಜ್ಜು ಮೈ. ತಲೆಯ ಮುಸುಕು, ಕಂಕಳಲ್ಲಿನ ಮಗು, ಗೃಹಕೃತ್ಯದ ಕೆಲಸ ಯಾವುದನ್ನೂ ಅವಳು ಸುದಾರಿಸ ಲಾರದವಳು. ಕೈಯಲ್ಲೇನೂ ಕೆಲಸವಿರುತ್ತಿರಲಿಲ್ಲ. ಆದ್ದರಿಂದ ಅವಳು ಎಂದೂ ಹೊತ್ತಿಗೆ ಮುಂಚೆ ಏಳುತ್ತಿದ್ದವಳಲ್ಲ. ಚಿಕ್ಕವಳು ಅವಳೊಡನೆ ಹೆಚ್ಚಾಗಿ ಏನೂ ಹೇಳುತ್ತಲೂ ಇರಲಿಲ್ಲ. ಮೃದುಸ್ವರದಲ್ಲಿ ಒಂದೆರಡುಬಾರಿ ತೀಕ್ಷ್ಣವಾದ ಮಾತುಗಳಿಂದ ಕಟುಕುತ್ತಿದ್ದಳು; ತಕ್ಷಣ ಹಿರಿಯವಳು ಹಾ—

ಹೂಂ ಎಂದುಕೊಂಡು ಕೋಪಿಸಿ ಕೂಗಾಡಿ ಅತ್ತು ಕರೆದು ಗದ್ದಲ ಮಾಡುತ್ತಿದ್ದಳು ಮತ್ತು ಕೇರಿಯವರನ್ನೆಲ್ಲಾ ಬೇಜಾರುಪಡಿಸುತ್ತಿದ್ದಳು.

ಈ ಎರಡು ಜೋಡಿ ಗಂಡಹೆಂಡರ ನಡುವೆಯೂ ಸ್ವಾಭಾವಿಕವಾಗಿ ಆಶ್ಚರ್ಯಕರವಾದ ಐಕ್ಯತೆಯಿತ್ತು. ದುಃಖಿರಾಮನು ದಪ್ಪ ಆಕಾರದ ಮನುಷ್ಯ. ಬಲವಾದ ಅಗಲವಾದ ಮೂಳೆಗಳು - ಸಣ್ಣ ಮೂಗು. ಕಣ್ಣುಗಳೆರಡು ಈ ಪ್ರಪಂಚವನ್ನು ಸರಿಯಾಗಿ ಅರಿಯಲಾರದವಂತೆ ಇದ್ದುವು. ಆದರಂತೆ ಆದ ರೆಡೆಗೆ ಯಾವ ತರಹದ ವಿಶೇಷ ದೃಷ್ಟಿಯೂ ಬೀಳುತ್ತಿರಲಿಲ್ಲ. ಇಂತಹ ಸಾಧುಸ್ವಭಾವವುಳ್ಳ ಮತ್ತು ಭೀಷಣವಾದ ಇಂತಹ ಬಲಿಷ್ಟನಾದರೂ ಕೈಲಾಗ ದವನನ್ನು ಕಾಣುವುದು ದುರ್ಲಭ.

ಛಿದಾಮನು ಹೊಳೆಯುವ ಕರಿಯ ಕಲ್ಲಿನಿಂದ ಯತ್ನಪೂರ್ವಕವಾಗಿ ಕೆತ್ತಿಮಾಡಿದ ವಿಗ್ರಹದಂತೆ ಇದ್ದನು. ಮೈಯಲ್ಲಿ ಎಷ್ಟು ಮಾತ್ರವೂ ಬೊಜ್ಜಾ ಗಲೀ ಶಿಥಿಲತೆಯಾಗಲೀ ಇರಲಿಲ್ಲ. ಪ್ರತಿಯೊಂದು ಅಂಗವೂ ಶಕ್ತಿ ಮತ್ತು ನಿಪುಣತೆಯಿಂದ ಕೂಡಿ ಅತ್ಯಂತ ಸಂಪೂರ್ಣತೆಯನ್ನು ಹೊಂದಿತ್ತು. ನದಿಯ ಎತ್ತರವಾದ ದಡದಿಂದ ಕೆಳಗೆ ನೀರಿನಲ್ಲಿ ಧುಮುಕುವುದರಲ್ಲಾಗಲೀ, ದೋಣಿಯ ಜಳವೆ ಹಾಕುವುದರಲ್ಲಾಗಲೀ, ಬಿದಿರಮೆಳೆ ಮೇಲೆ ಹತ್ತಿ ಆರಿಸಿ ಆರಿಸಿ ಗಳುಗಳನ್ನು ಕತ್ತರಿಸಿ ತರುವುದರಲ್ಲಾಗಲೀ, ಎಲ್ಲ ಕೆಲಸ ಕಾರ್ಯ ಗಳನ್ನೂ ಒಂದು ನಿಯಮದಿಂದ ಸಹಜವಾಗಿಯೂ ಲಕ್ಷಣವಾಗಿಯೂ ಮಾಡು ತ್ತಿದ್ದನು. ಉದ್ದನಾದ ಕರಿಯ ಕೂದಲಿಗೆ ಎಣ್ಣೆಹಚ್ಚಿ ಬಾಚಿ ಪ್ರಯತ್ನ ಪೂರ್ವಕವಾಗಿ ಸುರುಳಿ ಸುರುಳಿಮಾಡಿ ಹೆಗಲ ಮೇಲೆ ಬೀಳುವಂತೆ ಬಿಡು ತ್ತಿದ್ದನು. ಉಡಿಗೆ ತೊಡಿಗೆಗಳಲ್ಲಿಯೂ ಒಂದು ವಿಚಿತ್ರ ಆಸಕ್ತಿಯು ಕಾಣು ತ್ತಿತ್ತು.

ಇತರ ಹಳ್ಳಿಯ ಹುಡುಗಿಯರ ಸೌಂದರ್ಯದ ವಿಷಯದಲ್ಲಿ ಅವನಿಗೆ ಉದಾಸೀನ ದೃಷ್ಟಿಯಿರಲಿಲ್ಲ. ಆದರೆ ಅವರ ಕಣ್ಣುಗಳಿಗೆ ತಾನು ಲಕ್ಷಣವಾಗಿ ಕಾಣಿಸಬೇಕೆಂದು ಪ್ರಯತ್ನಿಸುತ್ತಿದ್ದನು. ಆಗಲೂ ಛಿದಾಮನು ತನ್ನ ಪ್ರಾಯದ ಹೆಂಡತಿಯನ್ನು ವಿಶೇಷವಾಗಿ ಪ್ರೀತಿಸುತ್ತಿದ್ದನು. ಉಭಯರಲ್ಲಿ ಜಗಳವೂ ಆಗುತ್ತಿತ್ತು, ಸಮಾಧಾನವೂ ಆಗುತ್ತಿತ್ತು. ಯಾರೂ ಯಾರನ್ನೂ ಸೋಲಿಸಲಾಗುತ್ತಿರಲಿಲ್ಲ. ಮತ್ತೊಂದು ಕಾರಣದಿಂದ ಉಭಯತ್ರರಲ್ಲಿ

ಬಂಧನವು ಬಿಗುವಾಗಿತ್ತು. ಚಂದಿರೆಯು ಅತಿ ಚಂಚಲ ಪ್ರಕೃತಿಯ ಹೆಣ್ಣೆಂದು ಛಿದಾಮನಿಗೆ ನಂಬಿಕೆ. ಚಂದಿರೆಯು "ನನ್ನ ಗಂಡನಿಗೆ ನಾಲ್ಕು ಕಡೆಯೂ ಕಣ್ಣು. ಅವನನ್ನು ಸ್ವಲ್ಪ ಎಳೆದು ಹಿಡಿದಿಡದಿದ್ದರೆ ಎಂದೋ ಕೈತಪ್ಪಿ ಹೋಗು ವನು" ಎಂದು ಭಾವಿಸುತ್ತಿದ್ದಳು.

ಮೇಲೆ ಹೇಳಿದ ಘಟನೆಗಳು ಸಂಭವಿಸುವುದಕ್ಕೆ ಕೆಲಕಾಲ ಮುಂಚಿ ನಿಂದ ಗಂಡಹೆಂಡರಲ್ಲಿ ಒಂದು ದೊಡ್ಡ ಜಗಳವಾಗಿತ್ತು. ತನ್ನ ಗಂಡನು ಕೆಲಸದ ನೆಪವನ್ನು ಹೇಳಿ ಆಗಾಗ್ಗೆ ದೂರ ಹೋಗುತ್ತಿದ್ದುದನ್ನು ಚಂದಿರೆಯು ಕಂಡಳು. ಅಲ್ಲದೆ ಒಮ್ಮೊಮ್ಮೆ ಎರಡು ಮೂರು ದಿನಗಳ ನಂತರ ಹಿಂತಿರುಗು ತ್ತಿದ್ದನು. ಆದರೆ ಏನೂ ಸಂಪಾದಿಸಿ ತರುತ್ತಿರಲಿಲ್ಲ. ಗಂಡನ ನಡವಳಿಕೆಯು ಸರಿಯಾಗಿಲ್ಲವೆಂದು ತಿಳಿದು ಚಂದಿರೆಯು ಸ್ವಲ್ಪ ಬಾಯಿ ಮಾಡಲಾರಂಭಿಸಿ ದಳು. ಮನಸ್ಸಿಗೆ ಬಂದಾಗ ಸ್ನಾನಘಟ್ಟಕ್ಕೆ ಹೋಗಲಾರಂಭಿಸಿದಳು ಮತ್ತು ಕೇರಿಯನ್ನೆಲ್ಲಾ ತಿರುಗಿಕೊಂಡು ಬರುತ್ತ ಮನೆಗೆ ಬಂದನಂತರ ಕಾಶೀ ಮಜುಂದಾರರ ನಡುಕಲ ಮಗನನ್ನು ವಿಶೇಷವಾಗಿ ವರ್ಣಿಸತೊಡಗಿದಳು.

ಛಿದಾಮನ ಹಗಲು ರಾತ್ರಿಗಳ ನಡುವೆ ಯಾರೋ ವಿಷವನ್ನಿಟ್ಟ ಹಾಗಾ ಯಿತು. ಕೆಲಸ ಕಾರ್ಯಗಳಿಗಾಗಿ ಹೋಗಿ ಎಲ್ಲೂ ಒಂದು ಘಳಿಗೆ ನೆಮ್ಮದಿ ಯಿಂದ ಇರಲಾರದಿದ್ದನು. ಒಂದು ದಿನ ಅತ್ತಿಗೆಯು ಬಂದು ಬಹುವಾಗಿ ಬೆದರಿಸಿದಳು. ಅವಳು ಕೈಗಳನ್ನು ಅಲ್ಲಾಡಿಸುತ್ತ ಝುಂಕಾರದೊಡನೆ ಸತ್ತು ಹೋದ ತಂದೆಯನ್ನು ಸಂಬೋಧಿಸುತ್ತ—'ಈ ಹುಡುಗಿ ಬಿರುಗಾಳಿಯ ಮುಂದಿರುವಳು. ಅವಳನ್ನು ನಾನು ದಾರಿಗೆ ತರಬಲ್ಲೆನೆ? ಅವಳೆಂದೋ ಮನೆಹಾಳು ಮಾಡುವಳೆಂಬುದನ್ನು ನಾನು ಬಲ್ಲೆ' ಎಂದು ಹೇಳಿದಳು.

ಚಂದಿರೆಯು ಪಕ್ಕದ ಕೊಠಡಿಯಲ್ಲಿದ್ದವಳು ಅಲ್ಲಿಗೆ ಬಂದು ಮೆಲ್ಲ ಮೆಲ್ಲಗೆ—"ಯಾಕಕ್ಕಾ, ನಿನಗೇಕೆ ಅಷ್ಟು ಭಯ" ಎಂದಳು. ಇಬ್ಬರು ಹೆಂಗಸರಲ್ಲೂ ವಿಶೇಷವಾಗಿ ಮಾತುಕಥೆಗಳು ನಡೆದವು.

ಛಿದಾಮನು ಕಣ್ಣುಗಳನ್ನು ಅರಳಿಸಿಕೊಂಡು "ಇನ್ನು ಮುಂದೆ ಎಂದಾ ದರೂ ನೀನು ಒಂಟಿಯಾಗಿ ನದೀಘಾಟಿಗೆ ಹೋಗಿದ್ದೆಯೆಂದು ಕೇಳಿದೆನೋ, ಅಂದು ನಿನ್ನ ಮೂಳೆ ಮುರೀತಿನಿ" ಎಂದನು.

ಚಂದಿರೆಯು "ಹಾಗಾದರೆ ಮೂಳೆ ಜೋಡಿಸಿಕೋತೀನಿ" ಎಂದು ಹೇಳಿ ತಕ್ಷಣ ಹೊರಗೆ ಹೊರಡಲು ಸಿದ್ಧಳಾದಳು.

ಛಿದಾಮನು ಒಂದು ಹಾರು ಹಾರಿ ಅವಳ ತಲೆಯ ಕೂದಲನ್ನು ಹಿಡಿದು ಕೊಂಡು ಮನೆಯೊಳಗೆ ಕೂಡಿ ಹೊರಗಿನಿಂದ ಬಾಗಿಲು ಹಾಕಿಕೊಂಡು ಹೋದನು.

ಕೆಲಸದಿಂದ ಸಂಜೆಗೆ ಹಿಂತಿರುಗಿ ಬಂದು ನೋಡಲು ಕೊಠಡಿಯು ತೆರೆದಿತ್ತು. ಮನೆಯಲ್ಲಿ ಯಾರೂ ಇರಲಿಲ್ಲ. ಚಂದಿರೆಯು ಮೂರು ಹಳ್ಳಿಗಳನ್ನು ದಾಟಿ ತಮ್ಮ ಸೋದರಮಾವನ ಮನೆಗೆ ಹೋಗಿ ನೆಲಸಿದ್ದಳು.

ಛಿದಾಮನು ಅಲ್ಲಿಂದ ಬಹು ಕಷ್ಟದಿಂದ ಮತ್ತು ಹಲವು ಪ್ರಯತ್ನಗಳಿಂದ ಅವಳನ್ನು ಮನೆಗೆ ಕರೆದು ತಂದು ತನ್ನ ಸೋಲನ್ನು ಒಪ್ಪಿಕೊಂಡನು. ಒಂದು ಉದ್ಧರಣೆ ಪಾದರಸವನ್ನು ಮುಷ್ಟಿಯಲ್ಲಿ ಬಲವಾಗಿ ಹಿಡಿದಿಡುವುದು ಹೇಗೆ ಅಸಾಧ್ಯವೋ ಹಾಗೆಯೇ ಈ ಸಣ್ಣ ಹುಡುಗಿಯನ್ನು ಬಲಾತ್ಕಾರದಿಂದ ಅಡಗಿಸಿಡುವುದು ಅಸಾಧ್ಯವೆಂದು ಅರಿತನು. ಪಾದರಸದಂತೆಯೇ ಬೆರಳ ಸಂದಿಯಲ್ಲಿ ನುಸುಳಿ ಹೊರಗೆ ಹೋಗಿ ಬಿಡುತ್ತಿದ್ದಳು.

ಮತ್ತೆ ಅವನು ಬಲಪ್ರದರ್ಶನ ಮಾಡಲಿಲ್ಲ. ಆದರೆ ಬಹು ಅಶಾಂತತೆಯಿಂದ ವಾಸಿಸತೊಡಗಿದನು. ಈ ಚಂಚಲ ಯುವತಿ ಹೆಂಡತಿಯ ವಿಷಯದಲ್ಲಿ ಅವನಿಗೆ ಸದಾ ಸಂದೇಹದಿಂದ ಕೂಡಿದ ಪ್ರೇಮವು ಉಗ್ರವಾದೊಂದು ವೇದನೆಯಂತೆ ವಿಷಮ ಹಿಂಸೆಯಾಗಿತ್ತು. "ಅಷ್ಟೇಕೆ - ಒಮ್ಮೊಮ್ಮೆ ಇವಳು ಸತ್ತುಹೋದರೆ ನಾನು ನಿಶ್ಚಿಂತನಾಗಿ ಸ್ವಲ್ಪ ನೆಮ್ಮದಿಯಾಗಿ ಇರುವೆನು" ಎಂದು ಆಲೋಚಿಸುತ್ತಿದ್ದನು. ಮನುಷ್ಯರ ಮೇಲೆ ಮನುಷ್ಯರಿಗೆ ಎಷ್ಟು ಹೊಟ್ಟೆಕಿಚ್ಚಿರುವುದೋ ಅಷ್ಟು ಯಮನ ಮೇಲಿರದು.

ಈ ಸಮಯದಲ್ಲಿ ಮನೆಯಲ್ಲಿ ಈ ವಿಪತ್ತು ಘಟಿಸಿತು. ಖೂನಿಮಾಡಿದುದನ್ನು ಒಪ್ಪಿಕೊಳ್ಳುವಂತೆ ಚಂದಿರೆಗೆ ಅವಳ ಗಂಡನು ಹೇಳಿದಾಗ ಅವಳು ಸ್ತಂಭಿತಳಾದಳು. ಅವಳ ಕಪ್ಪಾದ ಕಣ್ಣುಗಳೆರಡೂ ಕಾಲಾಗ್ನಿಯಂತೆ ನೀರವವಾಗಿ ಅವಳ ಗಂಡನನ್ನು ಸುಡತೊಡಗಿದವು. ಅವಳ ಸಮಸ್ತ ಶರೀರ ಮನಸ್ಸುಗಳೂ ಕ್ರಮೇಣ ಸಂಕುಚಿತವಾಗಿ ರಾಕ್ಷಸರೂಪೀ ಗಂಡನ ಕೈಯಿಂದ

ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದುವು. ಅವಳ ಅಂತರಾತ್ಮವು ಸಂಪೂರ್ಣ ವಾಗಿ ವಿಮುಖವಾಗಿ ಇವರೆಲ್ಲರಿಗೆ ದೂರವಾಗಿ ನಿಂತಿತ್ತು. ನಿನಗೇನೂ ಭಯ ವಿಲ್ಲವೆಂದು ಛಿದಾಮನು ಧೈರ್ಯ ಹೇಳಿದನು. ಅನಂತರ ಪೋಲೀಸರ ಬಳಿ, ಮ್ಯಾಜಿಸ್ಟ್ರೇಟರ ಬಳಿ ಏನೇನು ಹೇಳಬೇಕೋ ಎಲ್ಲವನ್ನೂ ಮತ್ತೆ ಮತ್ತೆ ಹೇಳಿ ಪಾಠ ಮಾಡಿಸತೊಡಗಿದನು. ಚಂದಿರೆಯು ಆ ದೀರ್ಘ ಕಾಹಿನಿಗೆ ಕಿವಿ ಗೊಡಲಿಲ್ಲ. ಮರದಗೊಂಬೆಯ ಹಾಗೆ ಕುಳಿತಿದ್ದಳು.

ಎಲ್ಲ ಕೆಲಸದಲ್ಲೂ ದುಃಖೀರಾಮನಿಗೆ ಛಿದಾಮನ ಬೆಂಬಲ. ಛಿದಾ ಮನು ಚಂದಿರೆಯ ಮೇಲೆ ಎಲ್ಲ ದೋಷವನ್ನೂ ಹೊರಿಸ ತೊಡಗಿದಾಗ – 'ಹಾಗಾದರೆ ಅವಳ ಗತಿಯೇನು' ಎಂದು ಕೇಳಿದ. 'ಅವಳನ್ನು ನಾನು ಉಳಿಸಿಕೊಳ್ಳುವೆನು' ಎಂದು ಛಿದಾಮನು ಹೇಳಿದನು. ಬೃಹತ್‌ಕಾಯ ದುಃಖೀರಾಮನು ನಿಶ್ಚಿಂತನಾದನು.

## ಮೂರನೆಯ ಪರಿಚ್ಛೇದ

ಛಿದಾಮನು ತನ್ನ ಹೆಂಡತಿಗೆ - ''ಅತ್ತಿಗೆಯು ನನ್ನನ್ನು ಕುಡುಗೋಲಿ ನಿಂದ ಹೊಡೆಯಲು ಬಂದಳು. ನಾನು ಮಚ್ಚನ್ನು ಎತ್ತಿಕೊಂಡು ಅವಳ ಏಟನ್ನು ತಡೆಯಲು ಹೋದೆನು. ಅಕಸ್ಮಾತ್ತಾಗಿ ಹೇಗೋ ತಗುಲಿತು" ಎಂದು ಪೋಲೀಸರಲ್ಲಿ ಹೇಳಬೇಕೆಂದು ಕಲಿಸಿಕೊಟ್ಟಿದ್ದನು. ಇದೆಲ್ಲವೂ ರಾಮಲೋಚನ ಚಕ್ರವರ್ತಿಯ ರಚನೆ. ಇದಕ್ಕೆ ಅನುಕೂಲವಾಗಿ ಯಾವ ಯಾವ ಅಲಂಕಾರ ಮತ್ತು ಪ್ರಯೋಗಗಳ ಆವಶ್ಯಕತೆಯಿತ್ತೋ ಅವನ್ನೂ ವಿಸ್ತಾರವಾಗಿ ಛಿದಾಮನಿಗೆ ಹೇಳಿಕೊಟ್ಟಿದ್ದನು.

ಪೋಲೀಸಿನವರು ಬಂದು ವಿಚಾರಣೆ ನಡೆಸತೊಡಗಿದರು. ಚಂದಿರಳೇ ತನ್ನ ಓರಗಿತ್ತಿಯನ್ನು ಕೊಲೆಮಾಡಿದಳೆಂದು ಎಲ್ಲ ಗ್ರಾಮಸ್ಥರ ಮನಸ್ಸಿಗೂ ಸ್ಥಿರವಾಗಿತ್ತು. ಎಲ್ಲ ಸಾಕ್ಷಿಗಳಿಂದಲೂ ಹಾಗೆಯೇ ಸ್ಥಿರವಾಯಿತು. ಚಂದಿರಳನ್ನೂ ಪ್ರಶ್ನಿಸಲು ಅವಳು....'ಹೌದು - ನಾನು ಕೊಲೆಮಾಡಿದೆ' ಎಂದಳು. "ಯಾತಕ್ಕೆ ಕೊಲೆಮಾಡಿದೆ—?"

"ಅವಳನ್ನು ಕಂಡರೆ ನನಗೆ ಆಗುತ್ತಿರಲಿಲ್ಲ."

"ಏನಾದರೂ ಜಗಳವಾಗಿತ್ತೋ— ?"

"ಇಲ್ಲ."

"ಅವಳು ನಿನ್ನನ್ನು ಹೊಡೆಯುವುದಕ್ಕಾಗಿ ಮೊದಲು ಯತ್ನಿಸಿದಳೋ."

"ಇಲ್ಲ."

ಈ ರೀತಿಯ ಜವಾಬನ್ನು ಕೇಳಿ ಎಲ್ಲರೂ ಮೂಕರಂತಾದರು. ಛಿದಾಮ ನಂತೂ ಸಂಪೂರ್ಣನಾಗಿ ಅಸ್ಥಿರನಾದನು. "ಅವಳು ನಿಜ ಹೇಳುತ್ತಿಲ್ಲ— ಅತ್ತಿಗೆಯು ಮೊದಲು" ಎಂದು ಹೇಳಲಾರಂಭಿಸಿದನು.

ದರೋಗನು ಬಲವಾಗಿ ಗದರಿಸಿ ಅವನ ಬಾಯಿ ಮುಚ್ಚಿದನು. ಕಡೆಗೆ ಅವಳನ್ನು ನಿಯಮದಂತೆ ಅಡಿಗಡಿಗೆ ಪ್ರಶ್ನಿಸಿಯೂ ಒಂದೇ ಉತ್ತರವನ್ನು ಹೊಂದಿದರು. ಹಿರಿಯವಳಿಂದ ಯಾವ ತರಹದ ಆಕ್ರಮಣವನ್ನೂ ಚಂದಿರೆಯು ಒಪ್ಪಿಕೊಳ್ಳಲಿಲ್ಲ.

ಇಂತಹ ಒರಟು ಸ್ವಭಾವದ ಹೆಂಗಸನ್ನು ಕಾಣುವುದು ಅಪೂರ್ವ. ಸಂಪೂರ್ಣವಾಗಿ ಸರ್ವಪ್ರಯತ್ನದಿಂದ ಗಲ್ಲಿನ ಮರವನ್ನು ಹತ್ತಲು ಓಡು ತ್ತಿರುವಳು. ಯಾವ ರೀತಿಯಿಂದಲೂ ಅವಳನ್ನು ತಡೆದು ನಿಲ್ಲಿಸುವುದು ಸಾಧ್ಯವಿರಲಿಲ್ಲ. ಇದೆಂತಹ ಕ್ರೂರ ಅಭಿಮಾನ. ಚಂದಿರೆಯು ಮನಸ್ಸಿನಲ್ಲೇ "ನಾನು ನಿನ್ನನ್ನು ಬಿಟ್ಟು ಈ ಯೌವನದೊಡನೆ ಗಲ್ಲಿನ ಮರವನ್ನು ವರಿಸಿರು ವೆನು. ನನ್ನ ಇಹಜನ್ಮದ ಉಳಿದ ಬಂಧನವು ಅದರೊಡನೆ'—ಎಂದು ಹೇಳು ವಂತಿತ್ತು.

ಒಬ್ಬ ನಿರೀಹ ಕ್ಷುದ್ರ ಚಂಚಲ ಕೌತುಕಪ್ರಿಯ ಗ್ರಾಮವಧು ಚಂದಿ ರೆಯು ಬಂಧಿನಿಯಾಗಿ ಚಿರಕಾಲದಿಂದ ಪರಿಚಯವಾಗಿದ್ದ ಗ್ರಾಮದ ಮಾರ್ಗ ದಲ್ಲಿ, ರಥದ ಬೀದಿಯಲ್ಲಿ, ಪೇಟೆಯ ಮಧ್ಯದಿಂದ, ನದೀಘಾಟಿಯ ಪಕ್ಕ ದಿಂದ, ಮಜುಮಾದಾರರ ಮನೆಯ ಇದಿರಿನಿಂದ, ಸ್ಕೂಲು ಮನೆಯ ಪಕ್ಕ ದಿಂದ ಸಮಸ್ತ ಪರಿಚಿತ ಜನರ ಕಣ್ಣೆದಿರಿನಲ್ಲಿ, ಕಳಂಕದ ಹೊರೆಯನ್ನು ಹೊತ್ತು ಶಾಶ್ವತವಾಗಿ ಮನೆಯನ್ನು ಬಿಟ್ಟು, ಗ್ರಾಮವನ್ನು ಬಿಟ್ಟು, ಹೊರಟು ಹೋದಳು. ಒಂದು ಗುಂಪು ಹುಡುಗರು ಹಿಂದೆ ಹಿಂದೆಯೇ ಹೊರಟರು. ಗ್ರಾಮದ ಹೆಂಗಸರು, ಅವಳ ಸಖಿ-ಸಂಗಡಿಗರು – ಕೆಲವರು ಮುಸುಕಿನ ಮರೆ ಯಿಂದ, ಕೆಲವರು ಬಾಗಿಲ ಸಂದಿಯಿಂದ, ಇನ್ನು ಕೆಲವರು ಗಿಡಗಳ ಮರೆ

ಯಿಂದ ಪೋಲೀಸರೊಡನೆ ಹೋಗುತ್ತಿದ್ದ ಚಂದಿರೆಯನ್ನು ನೋಡಿ ಲಜ್ಜೆ, ಘೃಣಾ, ಭಯಗಳೊಡನೆ ಮುಖ್ಯಚುಚ್ಚಿದವರಂತಿದ್ದರು.

ಡೆಪ್ಯುಟಿ ಮ್ಯಾಜಿಸ್ಟ್ರೇಟರ ಬಳಿಯಲ್ಲೂ ಚಂದಿರೆಯು ದೋಷವನ್ನು ಒಪ್ಪಿಕೊಂಡಳು. ಖೂನಿಯ ವೇಳೆಯಲ್ಲಿ ಹಿರಿಯವಳು ಅವಳ ಮೇಲೆ ಯಾವ ವಿಧವಾದ ಬಲಪ್ರಯೋಗವನ್ನಾದರೂ ಮಾಡಿದ್ದಳೆಂಬುದು ಅವಳ ಹೇಳಿಕೆಯಿಂದ ಹೊರಬೀಳಲಿಲ್ಲ.

ಆದರೆ ಅಂದು ಛಿದಾಮನು ಸಾಕ್ಷಿಯ ಕಟ್ಟೆಯನ್ನು ಹತ್ತುತ್ತಲೇ ಬಲವಾಗಿ ಅಳುತ್ತ—'ಮಹಾಸ್ವಾಮಿ, ನನ್ನ ಹೆಂಡತಿಯ ತಪ್ಪೇನೂ ಇಲ್ಲ' ಎಂದು ಹೇಳ ತೊಡಗಿದನು. ಮ್ಯಾಜಿಸ್ಟ್ರೇಟರು ಗದರಿಸಿ ಅವನ ಉಸಿರನ್ನು ಕಟ್ಟಿ, ಅವನನ್ನು ಪ್ರಶ್ನಿಸಲಾರಂಭಿಸಿದರು. ಅವನು ಒಂದೊಂದಾಗಿ ನಡೆದ ಕಥೆಯನ್ನು ವಿವರ ವಾಗಿ ಹೇಳಿದನು.

ಮ್ಯಾಜಿಸ್ಟ್ರೇಟರು ಅವನನ್ನು ನಂಬಲಿಲ್ಲ. ಏಕೆಂದರೆ ಮುಖ್ಯವಾದ ನಂಬಲರ್ಹವಾದ ಗೃಹಸ್ಥರ ಸಾಕ್ಷಿಯಾದ ರಾಮಲೋಚನನ ಹೇಳಿಕೆಯಲ್ಲಿ ಹೀಗಿತ್ತು:—

"ಕೃತ್ಯ ನಡೆದ ಸ್ವಲ್ಪಹೊತ್ತಿನೊಳಗೆ ನಾನು ಆ ಸ್ಥಳಕ್ಕೆ ಹೋಗಿದ್ದೆನು. ಸಾಕ್ಷಿ ಛಿದಾಮನು ನನ್ನ ಬಳಿ ಎಲ್ಲವನ್ನೂ ಹೇಳಿ ನನ್ನ ಕಾಲುಗಳನ್ನು ಹಿಡಿದುಕೊಂಡು 'ನನ್ನ ಹೆಂಡತಿಯನ್ನು ಉಳಿಸುವ ಮಾರ್ಗವನ್ನು ತೋರಿ ಸಿರಿ' ಎಂದು ಬೇಡಿಕೊಂಡನು. ನಾನು ಯಾವ ಮಾತನ್ನೂ ಹೇಳಲಿಲ್ಲ. ನಂತರ ಸಾಕ್ಷಿಯು 'ನಮ್ಮ ಅಣ್ಣನು ಅನ್ನ ಹಾಕೆಂದು ಹೆಂಡತಿಯನ್ನು ಕೇಳಿ ದಾಗ ಆಕೆಯು ಅನ್ನ ಬಡಿಸದಿರಲು ಕೋಪದಿಂದ ಅವಳ ತಲೆಯ ಮೇಲೆ ಹೊಡೆದನು ಎಂದು ಹೇಳಿದರೆ ನನ್ನ ಹೆಂಡತಿಯು ಉಳಿದುಕೊಳ್ಳುವುದು ಸಾಧ್ಯವೇ' ಎಂದು ನನ್ನ ಸಂಗಡ ಕೇಳಿದನು. ಆಗ ನಾನು 'ಎಚ್ಚರಿಕೆ.... ಮಗನೇ, ಕೋರ್ಟಿನಲ್ಲಿ ಎಳ್ಳಷ್ಟೂ ಸುಳ್ಳಾಡಬೇಡ – ಅದಕ್ಕಿಂತ ದೊಡ ತಪ್ಪು ಮತ್ತಾವುದೂ ಇಲ್ಲ'....ಇತ್ಯಾದಿ."

ರಾಮಲೋಚನನು ಮೊದಲು ಚಂದಿರೆಯನ್ನು ಕಾಪಾಡುವ ಉದ್ದೇಶ ದಿಂದ ಹಲವು ಕಥೆಗಳನ್ನು ಸೃಷ್ಟಿಸಿ ಸಿದ್ಧಪಡಿಸಿದ್ದನು. ಆದರೆ ಚಂದಿರೆಯು

ಅಡ್ಡದಾರಿ ಹಿಡಿಯಲು—"ಸಾಕಪ್ಪಾ ಸಾಕು. ಕೊನೆಯ ಕಾಲದಲ್ಲಿ ಸುಳ್ಳು ಸಾಕ್ಷಿ ಹೇಳಿದ್ದ ತಪ್ಪಿಗೆ ಸಿಕ್ಕಿಕೊಂಡು ಶಿಕ್ಷೆ ಅನುಭವಿಸಲೇ? ಎಷ್ಟು ಗೊತ್ತಿದೆಯೋ ಅಷ್ಟು ಹೇಳುವುದೇ ಸರಿಯಾದ ಮಾರ್ಗ"—ಎಂಬೀ ರೀತಿಯಲ್ಲಿ ಯೋಚಿಸಿ ತನಗೆ ತಿಳಿದದ್ದನ್ನೇ ಹೇಳಿದನು. ಆದರೆ ಅದಕ್ಕಿಂತ ಸ್ವಲ್ಪ ಹೆಚ್ಚಾಗಿ ಹೇಳದೆಯೂ ಇರಲಿಲ್ಲ.

ಡೆಪ್ಯುಟಿ ಮ್ಯಾಜಿಸ್ಟ್ರೇಟರು ಮೊಕದ್ದಮೆಯನ್ನು ಸೆಷನ್ಸ್‌ಗೆ ಕಳುಹಿಸಿದರು.

ಈ ನಡುವೆ ಆರಂಬ ಸಾರಂಬ, ಸಂತೆ ಸಾರಿಗೆ, ಸುಖ ದುಃಖ ಎಲ್ಲ ಕೆಲಸ ಕಾರ್ಯಗಳೂ ನಡೆಯುತ್ತಲೇ ಇದ್ದುವು; ಮತ್ತು ಹಿಂದಿನ ವರ್ಷಗಳಂತೆಯೇ ಹೊಸ ಬೆಳೆಯ ಗದ್ದೆಯಲ್ಲಿ ಶ್ರಾವಣದ ಜಡಿಮಳೆಯು ಸುರಿಯುತ್ತಲಿತ್ತು.

ಪೋಲೀಸಿನವರು ಅಪರಾಧಿ ಮತ್ತು ಸಾಕ್ಷಿಗಳನ್ನು ಕೋರ್ಟಿನಲ್ಲಿ ಹಾಜರ್ ಮಾಡಿದರು. ಇದಿರಿನಲ್ಲಿದ್ದ ಮುನ್ಸೀಫ್ ಕೋರ್ಟಿನಲ್ಲಿ ಬಹು ಜನರು ತಮ್ಮ ತಮ್ಮ ಮೊಕದ್ದಮೆಯ ಕೂಗನ್ನು ಕಾಯುತ್ತ ಕುಳಿತ್ತಿದ್ದರು. ಅಡಿಗೆ ಮನೆಗೆ ಸೇರಿದಂತಿದ್ದ ಜಗುಲಿಯೊಂದರ ವಿಭಾಗದ ಜಗಳದಲ್ಲಿ ವಾದಿಸಲು ಕಲ್ಕತ್ತೆಯ ಪ್ರಸಿದ್ಧ ವಕೀಲರೊಬ್ಬರು ಬಂದಿದ್ದರು. ವ್ಯಾಜ್ಯದಲ್ಲಿ ವಾದಿಯ ಬೆಂಬಲವಾಗಿ ಇಪ್ಪತ್ತೆರಡು ಜನ ಸಾಕ್ಷಿಗಳೂ ಬಂದಿದ್ದರು. ನೂರಾರು ಜನರು ತಮ್ಮ ತಮ್ಮ ಖಾತೇ ಲೆಕ್ಕದ (ಚೂಲ್ ಚೇರಾ) ಕೂದಲು ಕವಲು ಮೀಮಾಂಸೆ ನಡೆಸಲು ತವಕಪಡುತ್ತಿದ್ದರು. ಪ್ರಪಂಚದಲ್ಲಿ ಅದಕ್ಕಿಂತ ಅತಿಶಯವಾದದ್ದು ಮತ್ತೇನೂ ಇಲ್ಲವೆಂದು ಅವರುಗಳ ನಂಬಿಕೆ. ಛಿದಾಮನು ಕಿಟಕಿಯಿಂದ ಈ ಅತ್ಯಂತ ಗಡಿಬಿಡಿಯ ಪ್ರತಿದಿನದ ಪ್ರಪಂಚವನ್ನು ನೆಟ್ಟದೃಷ್ಟಿಯಿಂದ ನೋಡುತ್ತಿದ್ದನು. ಎಲ್ಲವೂ ಕನಸಿನಂತೆ ತೋರುತ್ತಿತ್ತು. ಕಾಂಪೌಂಡಿನಲ್ಲಿದ್ದ ದೊಡ್ಡ ಆಲದ ಮರದಲ್ಲಿ ಕೋಗಿಲೆಯೊಂದು ಕೂಗುತ್ತಿತ್ತು. ಅವಕ್ಕೆ ಯಾವ ಕಾನೂನಾಗಲೀ ಕೋರ್ಟಾಗಲೀ ಇಲ್ಲ.

ಚಂದಿರೆಯು ಜಡ್ಜರ ಹತ್ತಿರ—'ಓ ಸಾಹೇಬರೇ, ಒಂದೇ ಮಾತನ್ನು ಇನ್ನೂ ಮತ್ತೆ ಮತ್ತೆ ಎಷ್ಟು ಸಲ ಹೇಳಲಿ' ಎಂದರು.

ಜಡ್ಜ್ ಸಾಹೇಬರು ಅವಳಿಗೆ ತಿಳುವಳಿಕೆ ಹೇಳುತ್ತಾ—'ನೀನು ಒಪ್ಪಿ ಕೊಳ್ಳುತ್ತಿರುವ ಅಪರಾಧಕ್ಕೆ ಶಾಸ್ತಿಯೇನು ಬಲ್ಲೆಯೋ ?'

"ಇಲ್ಲ."

"ಅದಕ್ಕೆ ಶಾಸ್ತಿಯು ಫಾಸೀ (ಗಲ್ಲು)"

"ಸ್ವಾಮೀ, ನಿಮ್ಮ ಕಾಲಿಗೆ ಬೀಳುತ್ತೇನೆ. ನನಗೆ ಅದನ್ನೇ ವಿಧಿಸಿರಿ. ನಿಮಗೇನಿಷ್ಟವೋ ಹಾಗೆ ಮಾಡಿರಿ. ನನ್ನನ್ನು ಸುಮ್ಮನೆ ಹಿಂಸಿಸಬೇಡಿರಿ" ಎಂದು ಚಂದಿರೆಯು ಹೇಳಿಬಿಟ್ಟಳು.

ಛಿದಾಮನನ್ನು ಕೋರ್ಟಿನಲ್ಲಿ ಹಾಜರ್ಮಾಡಿದಾಗ ಚಂದಿರೆಯು ಮುಖ ತಿರುಗಿಸಿಕೊಂಡಳು. ಜಡ್ಜರು ಸಾಕ್ಷಿಯ ಕಡೆ ತಿರಿಗಿ—"ಹೇಳು. ಇವನು ನಿನಗೇನಾಗಬೇಕು" ಎಂದು ಕೇಳಿದರು.

ಚಂದಿರೆಯು ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು—"ಅವನು ನನ್ನ ಸ್ವಾಮಿ" ಎಂದಳು.

ಪ್ರಶ್ನೆ:—"ಅವನು ನಿನ್ನನ್ನು ಪ್ರೀತಿಸುವುದಿಲ್ಲವೋ ?"

ಉತ್ತರ:—"ಓ ಅಪಾರವಾಗಿ ಪ್ರೀತಿಸುವನು."

ಪ್ರಶ್ನೆ:—"ನೀನು ಅವನನ್ನು ಪ್ರೀತಿಸುವುದಿಲ್ಲವೋ ?"

ಉತ್ತರ:—"ಚೆನ್ನಾಗಿ ಪ್ರೀತಿಸುತ್ತೇನೆ."

ಛಿದಾಮನನ್ನು ಪ್ರಶ್ನಿಸಿದಾಗ—"ನಾನು ಕೊಲೆ ಮಾಡಿದೆನು" ಎಂದು ಅವನು ಹೇಳಿದನು.

"ಏಕೆ ?"

"ಅನ್ನ ಹಾಕೆಂದು ಕೇಳಿದೆ – ಅತ್ತಿಗೆಯು ಅನ್ನ ಹಾಕಲಿಲ್ಲ."

ದುಃಖೀರಾಮನು ಸಾಕ್ಷಿ ಹೇಳಲು ಬಂದು ಮೂರ್ಛೆಹೋದನು. ಮೂರ್ಛೆಯಿಂದ ಎಚ್ಚೆತ್ತನಂತರ "ಸಾಹೇಬರೇ, ನಾನು ಕೊಲೆ ಮಾಡಿದೆನು" ಎಂದನು.

"ಏಕೆ ?"

"ಅನ್ನ ಹಾಕೆಂದೆ – ಹಾಕಲಿಲ್ಲ."

ವಿಸ್ತಾರವಾಗಿ ವಿಚಾರಣೆ ನಡಿಸಿ ಇತರ ಹಲವು ಸಾಕ್ಷಿಗಳ ಹೇಳಿಕೆಯನ್ನು ಕೇಳಿ ಜಡ್ಜರು ಸ್ಪಷ್ಟವಾಗಿ ತಿಳಿದದ್ದೇನೆಂದರೆ—ಮನೆಯ ಹೆಂಗಸನ್ನು

ಗಲ್ಲಿನ ಅವಮಾನದಿಂದ ಉಳಿಸುವುದಕ್ಕಾಗಿ ಈ ಅಣ್ಣತಮ್ಮಂದಿರು ತಪ್ಪನ್ನು ಒಪ್ಪಿಕೊಳ್ಳುತ್ತಿರುವರು. ಆದರೆ ಚಂದಿರೆಯು ಪೋಲೀಸ್ ಠಾಣೆಯಲ್ಲಿ ಕೊಟ್ಟ ಹೇಳಿಕೆಯಿಂದ ಆರಂಭವಾಗಿ ಸೆಷನ್ ಕೋರ್ಟಿನವರೆಗೂ ಒಂದೇ ಮಾತನ್ನು ಹೇಳುತ್ತ ಬಂದಿರುವಳು. ಸ್ವಲ್ಪವೂ ಬದಲಾಯಿಸಿಲ್ಲ. ಇಬ್ಬರು ವಕೀಲರು ತಮ್ಮಿಚ್ಛೆಯಿಂದಲೇ ಅವಳನ್ನು ಉಳಿಸಬೇಕೆಂದು ಸರ್ವಪ್ರಯತ್ನ ಮಾಡಿ ಕೊನೆಗೆ ಸೋಲನ್ನು ಒಪ್ಪಿಕೊಂಡು ಕುಳಿತರು.

ಜೈಲಿನಲ್ಲಿ ಗಲ್ಲಿಗೆ ಹಾಕುವ ಮುಂಚೆ ದಯಾಳು ಸಿವಿಲ್ ಸರ್ಜನ್ನರು ಯಾರನ್ನಾದರೂ ನೋಡಬೇಕೆಂಬ ಆಶೆಯಿದೆಯೋ?" ಎಂದು ಚಂದಿರೆಯನ್ನು ಕೇಳಿದರು.

"ಒಂದು ಸಾರಿ ನನ್ನ ತಾಯಿಯನ್ನು ನೋಡಬೇಕೆಂದು ಆಶೆಯಾಗುತ್ತಿ" ಎಂದಳು ಚಂದಿರೆ.

ಡಾಕ್ಟರು—"ನಿನ್ನ ಗಂಡನು ನಿನ್ನನ್ನು ನೋಡುವುದಕ್ಕಾಗಿ ಕಾದಿರುವರು. ಅವನನ್ನು ಕರೆಸಬೇಕೋ?" ಎಂದರು.

ಚಂದಿರೆಯು ''ಸಾವು ಬೇಕು'' ಎಂದಳು.

---

# ಒಂದು ಸಣ್ಣ ಪುರಾತನ ಕಥೆ

ಕತೆ ಹೇಳಲೇ ಬೇಕೋ ? ಆದರೆ ಇನ್ನು ಹೇಳಲು ಶಕ್ತನಲ್ಲ. ಈಗ ಈ ದಣಿದ ಅಶಕ್ತ ವ್ಯಕ್ತಿಗೆ ವಿರಾಮ ಕೊಡಬೇಕು.

ಈ ಪದವಿಯನ್ನು ನನಗೆ ಯಾರು ಕೊಟ್ಟರೋ ಹೇಳುವುದು ಕಷ್ಟ. ಮೆಲ್ಲ ಮೆಲ್ಲನೆ ಒಬ್ಬೊಬ್ಬರಾಗಿ ನೀವುಗಳು ನಾಲ್ಕಾರು ಜನ ಬಂದು ಸುತ್ತಲೂ ಯಾವಾಗ ಕೂಡಿದಿರೊ ಮತ್ತು ಏತಕ್ಕಾಗಿ ನೀವುಗಳು ನನ್ನ ಮೇಲೆ ಇಷ್ಟು ಅನುಗ್ರಹ ತೋರಿಸಿದಿರೋ ನನ್ನಿಂದ ಇಷ್ಟು ಕೆಲಸದ ಆಶೆಯನ್ನಿಟ್ಟರೋ ಅದೆಲ್ಲವನ್ನು ಸ್ಪಷ್ಟವಾಗಿ ಹೇಳುವುದು ನನ್ನಿಂದ ಆಗದ ಕೆಲಸ. ಖಂಡಿತ ವಾಗಿಯೂ ಅದು ನಿಮ್ಮ ಸದ್ಗುಣದಿಂದ ಸೌಭಾಗ್ಯದಿಂದ ನನ್ನ ವಿಷಯದಲ್ಲಿ ನಿಮಗೆಲ್ಲ ಅನುಗ್ರಹವು ಉದಿಸಿತು. ಯಾವ ರೀತಿಯಲ್ಲಿ ಆ ಅನುಗ್ರಹವನ್ನು ಶಾಶ್ವತವಾಗಿ ಇಟ್ಟುಕೊಳ್ಳಬೇಕೋ ಅದಕ್ಕೋಸ್ಕರ ನನ್ನ ಯತ್ನಕ್ಕೆ ಅಭಾವ ವೇನೂ ಇಲ್ಲ.

ಆದರೆ ಐದು ಜನರ ಅವ್ಯಕ್ತ ಅನಿರ್ದಿಷ್ಟ ಸಮ್ಮತಿಯಿಂದ ಒದಗಿದ ಕೆಲಸದ ಹೊಣೆಯು ನನ್ನ ಮೇಲೆ ಬಿದ್ದಿದೆಯಲ್ಲಾ ಅದಕ್ಕೆ ನಾನು ಯೋಗ್ಯ ನಲ್ಲ. ಶಕ್ತಿಯಿದೆಯೋ ಇಲ್ಲವೋ ಎಂಬ ವಿಷಯವನ್ನೆತ್ತಿಕೊಂಡು ವಿನಯ ವನ್ನಾಗಲೀ ಅಹಂಕಾರವನ್ನಾಗಲೀ ಪ್ರದರ್ಶಿಸುವುದಕ್ಕೆ ಆಶಿಸೆನು. ಆದರೆ ಮುಖ್ಯ ಕಾರಣವೆಂದರೆ ಬ್ರಹ್ಮನು ನನ್ನನ್ನು ನಿರ್ಜನ-ಚರ ಜೀವರೂಪದಲ್ಲಿ ಸೃಷ್ಟಿಸಿದ್ದನು. ಖ್ಯಾತಿ, ಯಶಸ್ಸು ಮತ್ತು ಜನತೆಗೆ ಉಪಯೋಗಿಯಾಗು ವಂತೆ ನನ್ನ ಮೈಮೇಲೆ ದಪ್ಪ ಚರ್ಮವನ್ನು ಕೊಡಲಿಲ್ಲ. ಅವನ ಇಚ್ಛೆ ಯೇನೆಂದರೆ--"ನಿನ್ನ ಆತ್ಮವನ್ನು ರಕ್ಷಿಸಿಕೊಳ್ಳುವ ಆಶೆಯಿದ್ದರೆ ಒಬ್ಬೊಂಟಿಗ ನಾಗಿಯೇ ವಾಸಿಸು" ಎಂಬುದೇ. ಮನಸ್ಸು ಆ ಜನಶೂನ್ಯ ವಾಸಸ್ಥಾನಕ್ಕೇ ಸದಾ ಹಾತೊರೆಯುತ್ತಿದೆ. ಆದರೆ ಪಿತಾಮಹ ಅದೃಷ್ಟನು ಪರಿಹಾಸ ಕ್ಕಾಗಿಯೋ ಅಥವಾ ಮರೆವಿನಿಂದಲೋ ನನ್ನನ್ನು ದೊಡ್ಡ ಜನರ ಗುಂಪಿನ ನಡುವೆ ತಳ್ಳಿ ಈಗ ಬಾಯಿಯನ್ನು ಬಟ್ಟೆಯಿಂದ ಮುಚ್ಚಿಕೊಂಡು ನಗುತ್ತಿರು

ವನು. ನಾನೂ ಅವನ ಪರಿಹಾಸ್ಯದಲ್ಲಿ ಭಾಗವಹಿಸಲು ಯತ್ನಿಸುತ್ತಿರುವೆನು. ಆದರೆ ಯಾವ ರೀತಿಯಲ್ಲೂ ಸಫಲನಾಗಲು ಸಾಧ್ಯವಾಗಿಲ್ಲ.

ಓಡಿಹೋಗುವುದೂ ನನ್ನ ಕರ್ತವ್ಯವೆಂದು ನನಗೆ ಅನಿಸದು. ಸೈನ್ಯ ದಳದ ನಡುವೆ ಸ್ವಭಾವತಃ ಯುದ್ಧಕ್ಕಿಂತ ಹೆಚ್ಚಾಗಿ ಶಾಂತಿಯ ನಡುವೆ ಹೆಚ್ಚು ಚಟುವಟಿಕೆಯುಳ್ಳವರಾಗಿರುವವರೂ ಬಹು ಜನರಿರುವರು. ಆದರೆ ಅವರು ತಮ್ಮ ಮತ್ತು ಇತರ ತಪ್ಪಿನಿಂದ ಯುದ್ಧಕ್ಷೇತ್ರದ ನಡುವೆ ಬಂದು ನಿಂತ ವೇಳೆ ಯಲ್ಲಿ ಹಠಾತ್ತಾಗಿ ದಳವನ್ನು ಬಿಟ್ಟು ಓಡಿಹೋಗಲು ಅವರಿಗೆ ತೋರದು. ಅದೃಷ್ಟವು ಚೆನ್ನಾಗಿ ವಿವೇಚನೆಮಾಡಿ ಪ್ರಾಣಿಗಳನ್ನು ಸಾಧ್ಯವಾಗುವ ಕೆಲಸ ದಲ್ಲಿ ನಿಯೋಗಿಸುವುದಿಲ್ಲ. ಆದರೆ ಹಾಗಿದ್ದರೂ ಒಪ್ಪಿಸಿದ ಕೆಲಸವನ್ನು ದೃಢ ನಿಷ್ಠೆಯೊಡನೆ ಪೂರ್ತಿಮಾಡುವ ಹೊಣೆಯು ಮನುಷ್ಯರಿಗೆ ಸೇರಿದೆ.

ನೀವುಗಳು ನನ್ನ ಬಳಿ ಬಂದು ಕೂಡುವುದು ಆವಶ್ಯಕವೆಂದು ಎಣಿಸಿದಿರಿ ; ಮತ್ತು ಮರ್ಯಾದೆ ತೋರಿಸುವುದರಲ್ಲಿಯೂ ಕೃಪಣರಾಗಿರಲಿಲ್ಲ. ಆವಶ್ಯ ಕತೆಯು ಕಳೆದನಂತರ ಸೇವಕಾಧಮನ ವಿಷಯದಲ್ಲಿ ಅವಜ್ಞತೆಯನ್ನು ತೋ ರಿಸಿ ಅಷ್ಟಿಷ್ಟು ಆತ್ಮಗೌರವವನ್ನು ಅನುಭವಿಸುವ ಯತ್ನವನ್ನೂ ಮಾಡಿದಿರಿ ; ಪ್ರಪಂಚದಲ್ಲಿ ಇದೇ ಸ್ವಭಾವವಾದುದು. ಆದ್ದರಿಂದ ಈ ಕಾರಣದಿಂದಲೇ— 'ಸಾಧಾರಣ'ನೆಂಬ ಹೆಸರಿನ ಒಬ್ಬ ಅಕೃತಜ್ಞ, ಅವ್ಯವಸ್ಥಿತ ಚಿತ್ತರಾಜನನ್ನು ಅವನ ಅನುಚರವರ್ಗ ಸಂಪೂರ್ಣವಾಗಿ ನಂಬದು. ಆದರೆ ಅನುಗ್ರಹ ನಿಗ್ರಹದ ಕಡೆಗೆ ದೃಷ್ಟಿಸಿದರೆ ಎಲ್ಲ ಸಮಯದಲ್ಲೂ ಕೆಲಸ ಮಾಡಿಸುವುದು ಸಾಧ್ಯವಿಲ್ಲ. ಅಪೇಕ್ಷೆಯಿಲ್ಲದವರಾಗಿ ಕೆಲಸ ಮಾಡದಿದ್ದರೆ ಕೆಲಸದ ಗೌರವವಿರದು.

ಆದ್ದರಿಂದ ಏನನ್ನಾದರೂ ಕೇಳುವ ಆಶೆಯನ್ನಿಟ್ಟುಕೊಂಡು ಬಂದಿರು ವಿರಾದರೆ ಅಷ್ಟಿಷ್ಟು ಹೇಳುವೆನು. ಕೇಳಿರಿ. ದಣಿದೆನೆಂದು ಹೇಳೆನು ಮತ್ತು ಉತ್ಸಾಹದ ಆಶೆಯನ್ನೂ ಇಡುವುದಿಲ್ಲ.

ಆದರೆ ಇಂದು ಅತಿಕ್ಷುದ್ರ ಮತ್ತು ಪೃಥ್ವಿಯ ಅತ್ಯಂತ ಪುರಾತನ ಕತೆಯೊಂದು ನೆನಪಾಗುವುದು. ಮನೋಹರವಾಗದಿದ್ದರೂ ಸಣ್ಣದಾದ ಕಾರಣ ಕೇಳಲು ಹೆದರಿಕೆಯಾಗುವ ಸಂಭವವಿಲ್ಲ.

ಪೃಥ್ವಿಯ ಒಂದು ಮಹಾನದಿಯ ತೀರದಲ್ಲಿ ಒಂದು ಮಹಾರಣ್ಯವಿತ್ತು. ಆ ಅರಣ್ಯ ಮತ್ತು ಆ ನದೀ ತೀರದಲ್ಲಿ ಒಂದು ಮರಕುಟಿಗನೂ ಒಂದು ಬಾತೂ ವಾಸಿಸುತ್ತ ಇದ್ದುವು.

ಭೂಮಿಯ ಮೇಲೆ ಹುಳಗಳು ಸುಲಭವಾಗಿ ಸಿಕ್ಕುತ್ತಿದ್ದಾಗ ಹಸಿವನ್ನು ಕಳೆದುಕೊಳ್ಳುವುದರ ಮೂಲಕ ಸಂತುಷ್ಟಚಿತ್ತದಿಂದ ಉಭಯರೂ ಭೂಮಿ ಆಕಾಶಗಳ ಯಶೋಗಾನವನ್ನು ಹೇಳುತ್ತ ಕೊಬ್ಬಿದ ಮೈಯೊಡನೆ ವಿಹರಿಸುತ್ತಿದ್ದವು.

ಕಾಲಕ್ರಮದಲ್ಲಿ ದೈವಯೋಗದಿಂದ ಪೃಥ್ವಿಯಲ್ಲಿ ಕೀಟಗಳು ಸಿಕ್ಕುವುದು ದುರ್ಲಭವಾಯಿತು.

ಆಗ ನದೀ ತೀರದ ಬಾತು ಕೊಂಬೆಯ ಮೇಲಿನ ಮರಕುಟಿಕನೊಡನೆ —'ಮರಕುಟಿಗಣ್ಣಾ, ಮೇಲಿನಿಂದ ಬಹುಜನರಿಗೆ ಈ ಪೃಥ್ವಿಯು ನವೀನ ಶ್ಯಾಮಲ ಸುಂದರವೆಂದು ತೋರುವುದು. ಆದರೆ ನನಗೆ ತಿಳಿದಮಟ್ಟಿಗೆ ಇದು ಮೊದಲಿನಿಂದ ಕಡೆಯವರೆಗೆ ಜೀರ್ಣವಾಗಿದೆ' ಎಂದಿತು.

ರೆಂಬೆಯ ಮೇಲಿದ್ದ ಮರಕುಟಿಗವು ನದೀ ತೀರದಲ್ಲಿದ್ದ ಬಾತಿನೊಡನೆ ಹೇಳಿದ್ದೇನೆಂದರೆ—''ಬಾತಣ್ಣಾ, ಹಲವರು ಈ ಅರಣ್ಯವನ್ನು ತೇಜಸ್ಸಿನಿಂದ ಕೂಡಿ ಸುಂದರವಾದುದೆಂದು ಭಾವಿಸುವರು. ಆದರೆ ಇದು ಸಂಪೂರ್ಣವಾಗಿ ಅನ್ತಃಸಾರವಿಹೀನವಾದುದೆಂದು ನಾನು ದೃಢವಾಗಿ ಹೇಳುವೆನು—''

ಆಗ ಎರಡೂ ಕಲೆತು ಅದೇ ರೀತಿ ಪ್ರಮಾಣಿಸಿ ತೋರಿಸಲು ಸಿದ್ಧವಾದವು. ಬಾತು ನದಿಯ ತೀರದಲ್ಲಿ ಧುಮುಕಿ ಪೃಥ್ವಿಯ ಕೋಮಲ ಕೆಸರಿನಲ್ಲಿ ಅನವರತ ಕೊಕ್ಕನ್ನು ಹಾಕುತ್ತ ವಸುಂಧರೆಯ ಜೀರ್ಣತೆಯನ್ನು ತೋರಿಸಿಕೊಡತೊಡಗಿತು ಮತ್ತು ಮರಕುಟಿಗನು ವನಸ್ಪತಿಯ ಕಠಿಣ ಶಾಖೆಗಳಲ್ಲಿ ಅಡಿಗಡಿಗೆ ಕುಟುಕುತ್ತ ಅರಣ್ಯದ ಅಂತಃಸಾರಶೂನ್ಯತೆಯನ್ನು ಪ್ರಚಾರ ಮಾಡತೊಡಗಿತು.

ವಿಧಿಯ ವಿಡಂಬನೆಯಿಂದ ಮೇಲೆ ಹೇಳಿದ ಎರಡು ಚಟುವಟಿಕೆಯಾದ ಪಕ್ಷಿಗಳೂ ಸಂಗೀತ ವಿದ್ಯೆಯಿಂದ ವಂಚಿತವಾಗಿದ್ದುವು. ಆದಕಾರಣ ಕೋಗಿಲೆಯು ಭೂಮಿಯ ಮೇಲೆ ನವವಸಂತದ— ಸಮಾಗಮವನ್ನು ಪಂಚಮ

ಸ್ವರದಿಂದ ಘೋಷಣೆಮಾಡಲು ಆರಂಭಿಸಿತು ಮತ್ತು ಆಗ ಶಾಮಲ ಅರಣ್ಯ ದಲ್ಲಿ ನವನವಪ್ರಭಾತದ ಕೀರ್ತನ ಮಾಡುವುದರಲ್ಲಿ ನಿಯುಕ್ತವಾಗಿರಲು, ಆಗಲೂ ಈ ಎರಡು ಹಸಿದ ಅಸಂತುಷ್ಟ ಮೂಕಪಕ್ಷಿ ಎಡೆಬಿಡದ ಉತ್ಸಾಹ ದಿಂದ ತಮ್ಮ ಪ್ರತಿಜ್ಞೆಯನ್ನು ಪಾಲಿಸುವುದರಲ್ಲಿ ನಿರತವಾಗಿದ್ದುವು.

ಈ ಕತೆಯು ನಿಮಗೆ ಚನ್ನಾಗಿದೆಯೆಂದು ತೋರುವುದಿಲ್ಲವಲ್ಲವೆ? ಚೆನ್ನಾಗಿ ತೋರುವ ಕಥೆಯೂ ಅಲ್ಲ. ಆದರೆ ಇದರಲ್ಲಿರುವ ಎಲ್ಲಕ್ಕಿಂತ ವಿಶೇಷ ವಾದ ಗುಣವೆಂದರೆ ಐದಾರು ಪ್ಯಾರಗಳಲ್ಲಿ ಮುಗಿಯುವುವೇ.

ಈ ಕತೆಯು ಹಳೆಯದೆಂಬುದೂಕೂಡ ನಿಮ್ಮ ಮನಸ್ಸಿಗೆ ತೋರುವುದಿಲ್ಲ ವಲ್ಲವೇ? ಅದಕ್ಕೆ ಕಾರಣವು ಪೃಥ್ವಿಯ ಭಾಗ್ಯದೋಷದಿಂದ ಇದು ಅತಿ ಪುರಾತನ ಕತೆಯಾದರೂ ಚಿರಕಾಲ ನೂತನವಾಗಿಯೇ ಇದೆ. ಬಹು ದಿನಗಳಿಂದಲೂ ಕೃತಜ್ಞತಾ ಹೀನ ಮರಕುಟಿಗನು ಪೃಥ್ವಿಯ ದೃಢ ಕಠಿಣ ಅಮರ ಮಹತ್ವದ ಮೇಲೆ ಠಕ ಠಕ್ ಶಬ್ದದೊಡನೆ ಕೊಕ್ಕನ್ನು ಕುಟುಗುತ್ತ ಬಂದಿದೆ; ಮತ್ತು ಬಾತು ಪೃಥ್ವಿಯ ಸರಸ, ಉರ್ವರ ಕೋಮಲತ್ವದ ನಡುವೆ ಖಚ್ ಖಚ್ ದೊಡನೆ ಕೊಕ್ಕನ್ನು ಓಡಿಸುತ್ತಿದೆ. ಇಂದಿಗೂ ಈ ಪದ್ಧತಿಯು ತಪ್ಪಿಲ್ಲ. ಅವುಗಳ ಮನಸ್ಸಿನ ಆಕ್ಷೇಪಣೆಯು ಇನ್ನೂ ಉಳಿದೇ ಇದೆ.

ಕತೆಯೊಳಗೆ ಸುಖ ದುಃಖದ ವಿಷಯವೇನಾದರೂ ಇದೆಯೆಂದು ಕೇಳು ವಿರೇನು? ಇದರಲ್ಲಿ ದುಃಖದ ಸಂಗತಿಯೂ ಇದೆ; ಸುಖದ ಸಂಗತಿಯೂ ಇದೆ. ದುಃಖದ ಕಥೆಯೇನೆಂದರೆ—ಪೃಥ್ವಿಯು ಎಷ್ಟೇ ಉದಾರವಾಗಲಿ ಅರಣ್ಯವು ಎಷ್ಟೆ ಮಹತ್ವವುಳ್ಳದಾಗಿರಲಿ ಕ್ಷುದ್ರವಾದ ಕಣ್ಣುಗಳು ತಮಗೆ ಉಪಯುಕ್ತ ವಾದ ತಿನಿಸನ್ನು ಹೊಂದದೇ ಹೋದ ಮಾತ್ರಕ್ಕೆ ಅವನ್ನು ಹೊಡೆಯುತ್ತ ಬಂದಿರುವುದೇ ಸುಖದ ಸಂತೋಷದ ವಿಷಯವೇನೆಂದರೆ ಹೀಗಿದ್ದರೂ ಕೂಡ ನೂರಾರು, ಸಾವಿರಾರು ವರ್ಷಗಳಿಂದಲೂ ಪೃಥ್ವಿಯ ನವೀನತೆಯೂ ಅರಣ್ಯದ ಶ್ಯಾಮಲತ್ವೆಯೂ ಹಾಗೆಯೇ ಇದೆ. ಒಂದು ವೇಳೆ ಯಾರಾದರೂ ಸಾಯುವು ದಾದರೆ ಅವು ಆ ವಿದ್ವೇಷ—ವಿಷದಿಂದ ಜರ್ಝರಿತವಾದ ನಿರ್ಭಾಗ್ಯ ಪಕ್ಷಿಗಳೇ ಮತ್ತು ಪ್ರಪಂಚದಲ್ಲಿ ಯಾರಿಗೂ ಆ ಸುದ್ದಿಯು ತಿಳಿಯುವುದೂ ಸಾಧ್ಯವಿಲ್ಲ.

ನೀವುಗಳು ಈ ಕಥೆಯ ರುಂಡ ಮುಂಡ ಅರ್ಥವೇನಿದೆಯೆಂಬುದನ್ನು ತಿಳಿಯಲಾರಿರಿ. ಅಲ್ಲದೇ ತಾತ್ಪರ್ಯವು ವಿಶೇಷವಾಗಿ ಏನೂ ಜಟಿಲವಾಗಿಲ್ಲ. ಸ್ವಲ್ಪ ವಯಸ್ಸಾಯಿತೆಂದರೆ ತಿಳಿದುಕೊಳ್ಳುವಿರಿ.

ಏನಾದರಾಗಲಿ—ಎಲ್ಲ ವಿಧಗಳಲ್ಲೂ ಶುದ್ಧವಾಗಿರುವ ವಸ್ತುವು ನಿಮಗೆ ಉಪಯುಕ್ತವಾಗುವಂತೆ ಸೃಷ್ಟಿಯಾಗಿಲ್ಲ. ಅದಕ್ಕಂತೂ ಯಾವ ಸಂದೇಹವೂ ಇಲ್ಲ.



# ಉದ್ಧಾರ

ಗೌರಿಯು ಪ್ರಾಚೀನ ಧನಿಕ ವಂಶದಲ್ಲಿ ಅತ್ಯಾದರದಿಂದ ಸಾಕಲ್ಪಟ್ಟ ಹೆಣ್ಣು. ಗಂಡನಾದ ಪರೇಶನು ಬಡತನದ ಹೀನಸ್ಥಿತಿಯನ್ನು ತೊಲಗಿಸಿ ಈಗೀಗ ಸ್ವಪ್ರಯತ್ನದಿಂದಲೇ ತಕ್ಕಮಟ್ಟಿಗೆ ಅನುಕೂಲಸ್ಥನಾಗಿದ್ದನು. ಅವನು ಬಡವನಾಗಿದ್ದವರೆಗೂ ಮಗಳಿಗೆ ಕಷ್ಟವಾದೀತೆಂದು ಹೆದರಿ ಅವನ ಅತ್ತೆ ಮಾವಂದಿರು ಅವಳನ್ನು ಅವನ ಮನೆಗೆ ಕಳುಹಿಸಿಕೊಡಲಿಲ್ಲ. ಗೌರಿಯು ಸುಮಾರಾಗಿ ವಯಸ್ಕಳಾದ ನಂತರವೇ ಗಂಡನ ಮನೆಗೆ ಬಂದಿದ್ದಳು.

ಈ ಎಲ್ಲ ಕಾರಣಗಳಿಂದಲೇ ಪರೇಶನು ಸುಂದರಿಯೂ, ಯುವತಿಯೂ ಆದ ಹೆಂಡತಿಯು ಸಂಪೂರ್ಣವಾಗಿ ತನ್ನ ಅಧಿಕಾರಕ್ಕೆ ಒಳಪಡುವವಳಲ್ಲ ವೆಂದು ತಿಳಿದಿರಬೇಕು, ಮತ್ತು ಸಂದೇಹಪಡುವ ಪ್ರಕೃತಿಯು ಅವನಿಗೊಂದು ವ್ಯಾಧಿಯಂತೆ ಅಂಟಿಕೊಂಡಿರಬೇಕು.

ಪರೇಶನು ಪಶ್ಚಿಮದ ಒಂದು ಸಣ್ಣ ಪಟ್ಟಣದಲ್ಲಿ ವಕಾಲತ್ ಉದ್ಯೋಗ ವನ್ನು ಮಾಡುತ್ತಿದ್ದನು. ಮನೆಯಲ್ಲಿ ಆತ್ಮೀಯ ಸ್ವಜನರು ಯಾರೂ ಇರಲಿಲ್ಲ. ಒಬ್ಬಂಟಿಗಳಾದ ಹೆಂಡತಿಯ ವಿಷಯವಾಗಿ ಅವನ ಚಿತ್ತವು ತಳಮಳಗುಟ್ಟುತ್ತಿತ್ತು. ನಡು ನಡುವೆ ಒಂದೊಂದು ದಿನ ಅಕಸ್ಮತ್ತಾಗಿ ಅವೇಳೆಯಲ್ಲಿ ಅವನು ಕಛೇರಿಯಿಂದ ಮನೆಗೆ ಬಂದು ನಿಲ್ಲುತ್ತಿದ್ದನು. ಮೊದಮೊದಲಲ್ಲಿ ಗಂಡನ ಈ ತರಹದ ಆಕಸ್ಮಿಕ ಆಗಮನದ ಕಾರಣವನ್ನು ಗೌರಿಯು ಸರಿಯಾಗಿ ತಿಳಿದುಕೊಳ್ಳಲಿಲ್ಲ.

ಆಗಾಗ್ಗೆ ಪರೇಶನು ಕಾರಣವಿಲ್ಲದೆಯೇ ಒಬ್ಬೊಬ್ಬ ಆಳನ್ನು ಕೆಲಸದಿಂದ ಬಿಡಿಸುತ್ತಿದ್ದನು. ಯಾವ ಆಳೂ ಅವನಿಗೆ ಹೆಚ್ಚುಕಾಲ ತೃಪ್ತಿಯನ್ನುಂಟು ಮಾಡುತ್ತಿರಲಿಲ್ಲ. ಮುಖ್ಯವಾಗಿ ಕೆಲಸಕ್ಕೆ ಕಷ್ಟವಾದೀತೆಂದು ಗೌರಿಯು ಯಾವ ಆಳನ್ನಾದರೂ ಇಟ್ಟುಕೊಳ್ಳಬೇಕೆಂದೂ ಒತ್ತಾಯ ಮಾಡಿದರೆ ಪರೇಶನು ಅವ ನನ್ನು ಒಂದು ಘಳಿಗೆಯೂ ಮನೆಯಲ್ಲಿ ಇರಗೊಡುತ್ತಿರಲಿಲ್ಲ. ತೇಜಸ್ವಿನಿಯಾದ ಗೌರಿಯು ಗಂಡನ—ಈ ನಡವಳಿಕೆಯಿಂದ ಎಷ್ಟು ನೊಂದುಕೊಳ್ಳುವಳೋ

ಗಂಡನು ಅಷ್ಟೂ ಅಸ್ಥಿರನಾಗುತ್ತಿದ್ದನು. ಒಮ್ಮೊಮ್ಮೆ ಇನ್ನೂ ವಿಲಕ್ಷಣವಾಗಿ ನಡೆದುಕೊಳ್ಳುತ್ತಿದ್ದನು.

ಕೊನೆಗೆ ಮನಸ್ಸನ್ನು ಬಿಗಿ ಹಿಡಿಯಲಾರದೆ ಕೆಲಸದವಳನ್ನು ಗುಟ್ಟಾಗಿ ಕರೆದು ಪರೇಶನು ನಾನಾವಿಧದ ಸಂದೇಹಗಳ ಚರ್ಚೆಯನ್ನು ಮಾಡುತ್ತಿದ್ದ ವಿಷಯವೆಲ್ಲ ಗೌರಿಯ ಕಿವಿಗೆ ಬೀಳತೊಡಗಿತು. ಅಭಿಮಾನೀ ಮಿತಭಾಷಿಣೀ ನಾರಿಯು ಅವಮಾನದಿಂದ ಆಹತ ಸಿಂಹಿಣಿಯಂತೆ ಒಳಗೊಳಗೆ ಉದ್ದೀಪ್ತಳಾಗ ತೊಡಗಿದಳು ಮತ್ತು ಈ ಹುಚ್ಚು ಸಂದೇಹವು ದಂಪತಿಗಳ ನಡುವೆ ಪ್ರಲಯ ಖಡ್ಗದಂತೆ ನಿಂತು ಉಭಯರನ್ನೂ ಸಂಪೂರ್ಣವಾಗಿ ವಿಚ್ಛೇದಮಾಡ ತೊಡಗಿತು.

ಗೌರಿಯ ಹತ್ತಿರ ಅವನ ತೀವ್ರ ಸಂದೇಹವು ಪ್ರಕಾಶವಾಗಿ ನಾಚಿಕೆಯು ಬಿಟ್ಟುಹೋಗಲು ಪರೇಶನು ನಿತ್ಯವೂ ಪದೇ ಪದೇ ಸಂದೇಹವನ್ನು ವ್ಯಕ್ತಗೊಳಿಸಿ ಹೆಂಡತಿಯೊಡನೆ ಜಗಳವಾಡಲಾರಂಭಿಸಿದನು ಮತ್ತು ಗೌರಿಯು ಎಷ್ಟು ನಿರುತ್ತರ ಅವಜ್ಞತೆಯ ಮೂಲಕವೂ ತೀಕ್ಷ್ಣ ಕಟಾಕ್ಷದ ಮೂಲಕವೂ ಅವನನ್ನು ತಲೆಯಿಂದ ಕಾಲಿನವರೆಗೆ ತುಂಡು ತುಂಡಾಗಿ ಕತ್ತರಿಸ ತೊಡಗಿದಳೋ ಅವನ ಸಂದೇಹದ ಹುಚ್ಚಾಟವು ಅಷ್ಟೂ ಹೆಚ್ಚು ಮುಂದುವರಿಯುತ್ತಿತ್ತು.

ಈ ರೀತಿಯಲ್ಲಿ ಸ್ವಾಮಿಸುಖದಿಂದ ವಂಚಿತಳಾಗಿ ಪುತ್ರಹೀನ ತರುಣಿಯು ಧಾರ್ಮಿಕ ನಡವಳಿಕೆಯ ಕಡೆಗೆ ಮನಸ್ಸಿಟ್ಟಳು. ಹರಿಸಭೆಯ ನೂತನ ಪ್ರಚಾರಕ ಬ್ರಹ್ಮಚಾರೀ ಪರಮಾನಂದನನ್ನು ಕರೆದು ಮಂತ್ರೋಪದೇಶವನ್ನು ಪಡೆದಳು. ಮತ್ತು ಅವನಬಳಿ ಭಾಗವತದ ವ್ಯಾಖ್ಯಾನವನ್ನು ಕೇಳಲಾರಂಭಿಸಿದಳು. ಸ್ತ್ರೀ ಹೃದಯದ ಎಲ್ಲ ವ್ಯರ್ಥ ಸ್ನೇಹವೂ ಭಕ್ತಿಯ ಆಕಾರದಲ್ಲಿ ಒಟ್ಟುಗೂಡಿ ಗುರುದೇವನ ಪದತಲದಲ್ಲಿ ಸಮರ್ಪಿತವಾಯಿತು.

ಪರಮಾನಂದನ ಸಚ್ಚರಿತ್ರೆಯ ವಿಷಯವಾಗಿ ದೇಶ ವಿದೇಶಗಳಲ್ಲಿ ಯಾರ ಮನಸ್ಸಿನಲ್ಲೂ ಲೇಶ ಮಾತ್ರವೂ ಸಂದೇಹವಿರಲಿಲ್ಲ. ಎಲ್ಲರೂ ಅವನನ್ನು ಪೂಜಿಸುತ್ತಿದ್ದರು. ಪರೇಶನು ಈ ವಿಷಯದಲ್ಲಿ ಬಾಯ್ದೆರೆದು ಬಹಿರಂಗವಾಗಿ ಸಂಶಯವನ್ನು ಪ್ರಕಾಶಗೊಳಿಸಲಾರದವನಾಗಿದ್ದನೆಂದೇ ಅದು ಗುಪ್ತವಾದ ಘಾಯವಾಗಿ ಕ್ರಮೇಣ ಅವನ ಹೃದಯವನ್ನು ಕೊರೆಯುತ್ತಿತ್ತು.

ಒಂದು ದಿನ ಸಾಮಾನ್ಯ ಕಾರಣದಿಂದ ವಿಷವು ಉತ್ಪತ್ತಿಯಾಯಿತು.

ಹೆಂಡತಿಯು ಹತ್ತಿರ ಪರಮಾನಂದನ ಹೆಸರು ಹೇಳಿ ದುರಾಚಾರಿ, ಭಂಡ ಎಂದು ಬೈದು "ನೀನು ಸಾಲಿಗ್ರಾಮವನ್ನು ಹಿಡಿದುಕೊಂಡು ಆ ಬಕಧಾರ್ಮಿಕನನ್ನು ಮನಸ್ಸಿನಲ್ಲಿ ಪ್ರೀತಿಸುತ್ತಿಲ್ಲವೆಂದು ಪ್ರಮಾಣಮಾಡು ನೋಡೋಣ" ಎಂದು ಕೇಳಿದನು.

ತುಳಿಯಲ್ಪಟ್ಟ ಹೆಣ್ಣು ಹಾವಿನಂತೆ ಕ್ಷಣಮಾತ್ರದಲ್ಲಿ ಕೆರಳಿ ನಿಂತು ಸುಳ್ಳು ಡಂಭದ ಮೂಲಕ ಗಂಡನ ಮೈ ಉರಿಸಬೇಕೆಂದು ಗೌರಿಯು ರುದ್ಧಕಂಠದೊಡನೆ—"ಪ್ರೀತಿಸುತ್ತೇನೆ. ನೀವು ಏನು ಮಾಡಬೇಕೆನ್ನುವಿರೋ ಮಾಡಿರಿ!" ಎಂದಳು. ಪರೇಶನು ತಕ್ಷಣ ಕೊಠಡಿಗೆ ಬೀಗಹಾಕಿ ಅವಳನ್ನು ಅದರಲ್ಲಿ ಕೂಡಿಟ್ಟು ಕಛೇರಿಗೆ ಹೊರಟು ಹೋದನು.

ಅಸಹ್ಯ ರೋಷದಿಂದ ಗೌರಿಯು ಯಾವ ರೀತಿಯಲ್ಲೋ ಬಾಗಿಲು ತೆಗೆಸಿಕೊಂಡು ತಕ್ಷಣ ಮನೆಬಿಟ್ಟು ಹೊರಟುಹೋದಳು.

ಪರಮಾನಂದನು ನಿಶ್ಶಬ್ದವಾದ ಮನೆಯಲ್ಲಿ ಜನಹೀನ ಮಧ್ಯಾಹ್ನದ ಸಮಯದಲ್ಲಿ ಶಾಸ್ತ್ರಾಧ್ಯಯನ ಮಾಡುತ್ತಿದ್ದನು. ಅನೋಘ ವಾಹಿನೀ ವಿದ್ಯುಲ್ಲತೆಯಂತೆ ಗೌರಿಯು ಬ್ರಹ್ಮಚಾರಿಯ ಶಾಸ್ತ್ರಾಧ್ಯಯನದ ನಡುವೆ ಅಡ್ಡಬಂದಳು.

"ಇದೇನಿದು" ಎಂದು ಗುರುವು ಪ್ರಶ್ನಿಸಿದನು.

ಶಿಷ್ಯಳು—"ಗುರುದೇವ, ಅಪಮಾನಿತ ಸಂಸಾರದಿಂದ ನನ್ನನ್ನು ಉದ್ಧಾರಮಾಡಿ ಕರೆದುಕೊಂಡು ಹೋಗಿರಿ. ನಿಮ್ಮ ಸೇವಾವ್ರತದಲ್ಲಿ ನನ್ನ ಜೀವಮಾನವನ್ನು ಕಳೆಯುವೆನು—" ಎಂದಳು.

ಪರಮಾನಂದನು ಕಠಿಣವಾಗಿ ಗದರಿಸಿ ಗೌರಿಯನ್ನು ಮನೆಗೆ ಹಿಂತಿರಿಗಿಸಿದನು ಆದರೆ—ಅಯ್ಯೋ ಗುರುವೇ—ಅಂದಿನ ಆ ಛಿನ್ನವಾನ ಶಾಸ್ತ್ರಾಧ್ಯಯನದ ಸೂತ್ರವನ್ನು ಮತ್ತೆ ಮೊದಲಿನಂತೆ ಗಂಟು ಹಾಕುವುದು ಸಾಧ್ಯವೇ? ಪರೇಶನು ಮನೆಗೆಬಂದು ತೆರೆದ ಬಾಗಿಲನ್ನು ಕಂಡು 'ಇಲ್ಲಿಗೆ ಯಾರು ಬಂದಿದ್ದರು' ಎಂದು ಹೆಂಡತಿಯನ್ನು ಪ್ರಶ್ನಿಸಿದನು.

"ಯಾರೂ ಬಂದಿರಲಿಲ್ಲ. ನಾನೇ ಗುರುಗಳ ಬಳಿಗೆ ಹೋಗಿದ್ದೆನು" ಪರೇಶನ ಮುಖವು ಎವೆಯಿಕ್ಕುವಷ್ಟು ಹೊತ್ತು ಬಿಳುಪೇರಿ ತಕ್ಷಣ ರಕ್ತ ವರ್ಣವಾಯಿತು. 'ಏತಕ್ಕೆ ಹೋಗಿದ್ದೆ' ಎಂದು ಅವನು ಕೇಳಿದನು.

ಗೌರಿಯು—"ನನ್ನಿಷ್ಟ" ಎಂದಳು.

ಅಂದಿನಿಂದ ಕಾವಲಿಟ್ಟು ಹೆಂಡತಿಯನ್ನು ಕೊಠಡಿಯಲ್ಲಿ ಕೂಡಿಟ್ಟು ಪರೇಶನು ಅವಳಿಗೆ ಕೊಡಲಾರಂಭಿಸಿದ ಚಿತ್ರಹಿಂಸೆಯಿಂದ ಊರಿನಲ್ಲೆಲ್ಲಾ ಅವನಿಗೆ ಕೆಟ್ಟಹೆಸರಾಯಿತು.

ಈ ಎಲ್ಲ ಕುತ್ಸಿತ ಅಪಮಾನ ಮತ್ತು ಅತ್ಯಾಚಾರಗಳ ಸಂವಾದದಿಂದ ಪರಮಾನಂದನ ಹರಿಚಿಂತೆಯು ದೂರವಾಯಿತು. ಶೀಘ್ರದಲ್ಲಿ ಆ ಊರನ್ನು ತ್ಯಜಿಸಿ ಹೊರಟುಹೋಗುವುದು ಆವಶ್ಯಕವೆಂಬುದು ಅವನಿಗೆ ತೋರಿತು. ಆದರೆ ಸಂಕಟದಲ್ಲಿ ಸಿಕ್ಕಿರುವವಳನ್ನು ಕೈಬಿಟ್ಟು ದೂರ ಹೋಗಲು ಯಾವ ರೀತಿಯಲ್ಲೂ ಮನಸೊಪ್ಪಲಿಲ್ಲ. ಸನ್ಯಾಸಿಯ ಈ ಕೆಲವು ದಿನಗಳ ರಾತ್ರಿ ಹಗಲಿನ ಚರಿತ್ರೆಯನ್ನು ಭಗವಂತನೇ ಬಲ್ಲ.

ಕೊನೆಗೆ ಒಂದು ದಿನ ಬಂಧನದಲ್ಲಿರುವಂತೆಯೇ ಗೌರಿಗೆ ಒಂದು ಕಾಗದವು ತಲ್ಪಿತು. ಅದರಲ್ಲಿ ಹೀಗೆ ಬರೆದಿತ್ತು—'ವತ್ಸೇ, ಯೋಚಿಸಿ ನೋಡಿದೆನು. ಇದುವರಿಗೂ ಹಲವು ಜನ ಸಾಧ್ವೀ ಸಾಧಕ ರಮಣಿಯರು ಕೃಷ್ಣ ಪ್ರೇಮದಿಂದ ಸಂಸಾರವನ್ನು ತ್ಯಜಿಸಿರುವರು. ಸಂಸಾರದ ಅತ್ಯಾಚಾರ ದಿಂದ ಹರಿಪಾದ ಪದ್ಮಗಳಲ್ಲಿ ನಿನ್ನ ಚಿತ್ತವು ನೆಲಸಿದ್ದುದಾದರೆ ತಿಳಿಸು. ಆಗ ಭಗವಂತನ ಸಹಾಯದಿಂದ ಅವನ ಸೇವಕಳನ್ನು ಉದ್ಧಾರವಮಾಡಿ ಪ್ರಭುವಿನ ಅಭಯ ಪಾದಾರವಿಂದಗಳಲ್ಲಿ ಅರ್ಪಿಸಲು ಯತ್ನಿಸುವೆನು. ಫಾಲ್ಗುನ ಬಹುಳ ಏಕಾದಶಿ ಬುಧವಾರ ಮಧ್ಯಾಹ್ನ ೨ ಘಂಟೆಯ ಹೊತ್ತಿಗೆ ಇಚ್ಛೆ ಯಿದ್ದರೆ ನಿಮ್ಮ ಮನೆಯ ಸಮೀಪದ ಪುಷ್ಕರಣಿಯ ತೀರದಲ್ಲಿ ನನ್ನನ್ನು ಭೇಟಿ ಮಾಡಬಹುದು."—

ಗೌರಿಯು ಕಾಗದವನ್ನು ತಲೆಯ ಕೂದಲಲ್ಲಿ ಹೆರಳಿನ ನಡುವೆ ಮುಚ್ಚಿ ಟ್ಟಿದ್ದಳು. ಏಕಾದಶಿಯ ಮಧ್ಯಾಹ್ನ ಸ್ನಾನಕ್ಕೆ ಮುಂಚೆ ತಲೆ ಕೂದಲನ್ನು ಬಿಚ್ಚುವ ಸಮಯದಲ್ಲಿ ನೋಡಿದರೆ ಕಾಗದವಿರಲಿಲ್ಲ. ಅದು ಯಾವಾಗಲೋ ಹಾಸಿಗೆಯ ಬಳಿ ಬಿದ್ದುಹೋಗಿ ತನ್ನ ಗಂಡನ ಕೈಗೆ ಸಿಕ್ಕಿದೆಯೆಂದು ಸಂದೇಹ ವಾಯಿತು. ಗಂಡನು ಆ ಕಾಗದವನ್ನು ಓದಿ ಹೊಟ್ಟೆಕಿಚ್ಚಿನಿಂದ ಉರಿದು ಹೋಗುವನೆಂದು ಗೌರಿಗೆ ಒಳಗೊಳಗೆ ಒಂದು ವಿಧವಾದ ಜ್ವಾಲಾಮಯ ಆನಂದವು ಉಂಟಾಗತೊಡಗಿತು. ಆದರೆ ಅವಳ ತಲೆಯನ್ನಲಂಕರಿಸಿದ್ದ

ಕಾಗದವು ಪಾಷಂಡನ ಹಸ್ತಸ್ಪರ್ಶದಿಂದ ಅಪವಿತ್ರವಾಗಿದೆಯೆಂಬ ಸಂಗತಿಯು ಅವಳಿಗೆ ಅಸಹ್ಯವಾಯಿತು. ವೇಗವಾಗಿ ನಡೆದು ಗಂಡನ ಕೊಠಡಿಗೆ ಹೋದಳು.

ಗಂಡನು ಭೂಮಿಯಮೇಲೆ ಬಿದ್ದು ಗೊರ್ ಗೊರ್ ಎನ್ನುತ್ತ ಹೊರಳುತ್ತಿದ್ದುದನ್ನು ಕಂಡಳು. ಅವನ ಬಾಯಿಂದ ನೊರೆಯು ಹೊರಡುತ್ತಿತ್ತು. ಕಣ್ಣುಗುಡ್ಡೆಗಳು ಮೇಲಕ್ಕೆ ಸಿಕ್ಕಿಕೊಂಡಿದ್ದವು. ಬಲಗೈಯ ಮುಷ್ಟಿಯಲ್ಲಿ ಭದ್ರವಾಗಿ ಹಿಡಿದುಕೊಂಡಿದ್ದ ಕಾಗದವನ್ನು ಬಿಡಿಸಿಕೊಂಡು ಅವಸರವಾಗಿ ಡಾಕ್ಟರನ್ನು ಕರೆಸಿದಳು.

ಡಾಕ್ಟರು ಬಂದು—'ಅಪೋಪ್ಲೆಕ್ಸಿಯಾ ಆಗಿದೆ' ಎಂದರು. ಅಷ್ಟರಲ್ಲಿ ರೋಗಿಯ ಮರಣವಾಗಿತ್ತು. ಅದೇ ಹೊರ ಊರಿನಲ್ಲಿ ಪರೇಶನು ಒಂದು ಮುಖ್ಯವಾದ ವ್ಯಾಜ್ಯದಲ್ಲಿ ವಾದಿಸಬೇಕಾಗಿತ್ತು. ಸನ್ಯಾಸಿಯ ಅಧಃಪತನವು ಎಷ್ಟು ದೂರ ಮುಂದುವರಿದಿತ್ತೆಂದರೆ ಅವನು ಈ ಸುದ್ದಿಯನ್ನು ಕೇಳಿ ಗೌರಿಯನ್ನು ಮಾತನಾಡಿಸಲು ಸಿದ್ಧನಾಗಿದ್ದನು.

ಸದ್ಯ ವಿಧವೆ ಗೌರಿಯು ಕಿಟಕಿಯ ಮೂಲಕ ಗುರುದೇವನು ಕಳ್ಳನಂತೆ ಪುಷ್ಕರಣಿಯ ಬಳಿ ನಿಂತಿದ್ದುದನ್ನು ಕಂಡು ತಕ್ಷಣ ಮಿಂಚು ಬಡಿದವಳಂತೆ ದೃಷ್ಟಿಯನ್ನು ನೆಲಕ್ಕೆ ತಗ್ಗಿಸಿದಳು. ಗುರುವು ಎಂತಹ ಉಚ್ಚಸ್ಥಾನದಿಂದ ಎಷ್ಟರಮಟ್ಟಿಗೆ ಕೆಳಗೆ ಬಿದ್ದಿರುವನೆಂಬುದನ್ನು ಆಕೆಯು ತಿಳಿದಳು. ಅವಳ ಹೃದಯದಲ್ಲಿ ಮಿಂಚಿನ ಪ್ರಕಾಶದಿಂದ ತಿಳಿವಳಿಕೆಯುಂಟಾದಂತಾಯಿತು.

ಗುರುವು 'ಗೌರೀ' ಎಂದು ಕೂಗಿದನು.

'ಬಂದೆ ಸ್ವಾಮಿ' ಎಂದು ಅವಳು ಉತ್ತರಕೊಟ್ಟಳು.

ಮರಣದ ಸುದ್ದಿಯನ್ನು ಕೇಳಿ ದಹನಕ್ರಿಯಾದಿಗಳಿಗಾಗಿ ಪರೇಶನ ನೆಂಟರು ಬಂದು ತಲಪಿದಾಗ ಗೌರಿಯ ಮೃತದೇಹವು ಗಂಡನ ಮಗ್ಗುಲಲ್ಲಿ ಬಿದ್ದಿದ್ದುದನ್ನು ಕಂಡರು. ಅವಳು ವಿಷ ಕುಡಿದು ಸತ್ತಿದ್ದಳು. ಈ ಕಾಲದಲ್ಲಿ ಈ ಆಶ್ಚರ್ಯಕರವಾದ ಸಹಮರಣದ ದೃಷ್ಟಾಂತದ ಆ ಪಾತಿವ್ರತ್ಯ ಮಹಾತ್ಮೆಯಿಂದ ಎಲ್ಲರೂ ಸ್ತಂಭಿತರಾದರು.

---

# ಅಂಗಳ ಮತ್ತು ಅಂತಃಪುರ

ಬಿಪಿನ್ ಕಿಶೋರನು ಹಣವಂತರ ಮನೆಯಲ್ಲಿ ಜನ್ಮವೆತ್ತಿದ್ದನು. ಅದ ರಿಂದಲೇ ಹಣವನ್ನು ಯಾವ ಪ್ರಮಾಣದಲ್ಲಿ ವ್ಯಯ ಮಾಡುವುದನ್ನು ತಿಳಿದಿದ್ದನೋ ಅದರಲ್ಲಿ ಅರ್ಧ ಅಳತೆಯಷ್ಟು ಸಂಪಾದಿಸುವುದನ್ನು ಕಲಿತಿರಲಿಲ್ಲ. ಜನ್ಮವೆತ್ತಿದ ಮನೆಯಲ್ಲಿ ಸುಖರಾಂ ಹೆಚ್ಚು ಕಾಲ ವಾಸಿಸುವುದು ಸಾಧ್ಯವಿಲ್ಲ ವಾಯಿತು.

ಸುಂದರ ಸುಕುಮಾರ ಮೂರ್ತಿ, ತರುಣ ಯುವಕ, ಗಾಯನ—ವಾದನ ಗಳಲ್ಲಿ ಸಿದ್ಧಹಸ್ತ, ಕೆಲಸ ಕಾರ್ಯಗಳಲ್ಲಿ ಹದಿನಾರಾಣೆ ಅಪಟು—ಜಗತ್ತಿನ ದೃಷ್ಟಿಯಿಂದ ಸಂಪೂರ್ಣ ಅನಾವಶ್ಯಕ—ಮತ್ತು ಜೀವನ ಯಾತ್ರೆಯ ವಿಷಯದಲ್ಲಿ ಜಗನ್ನಾಥ ಸ್ವಾಮಿಯ ರಥದಂತೆ ಅಚಲ—ಯಾವ ಧೋರಣೆಯಿಂದ ಇದುವರಿಗೂ ಸಂಸಾರ ನಡೆಯಿತೋ ಆ ರೀತಿ ಮುಂದೆ ಅದನ್ನು ನಡೆಸುವುದು ಈಗ ಅವನ ಶಕ್ತಿ ಮೀರಿದ ವಿಷಯವಾಯಿತು.

ಅದೃಷ್ಟವಶಾತ್ ರಾಜಾ ಚಿತ್ತರಂಜನನು ಕೋರ್ಟ್-ಆಫ್ ವಾರ್ಡ್ಸ್ ನಿಂದ ಆಸ್ತಿಯನ್ನು ಪಡೆದು ಅಮೆಚೂರ್ ನಾಟಕಮಂಡಲಿಯನ್ನು ಸ್ಥಾಪಿಸುವ ಯತ್ನದಲ್ಲಿದ್ದನು. ಬಿಪಿನ ಕಿಶೋರನ ಸುಂದರ ಮುಖ, ಹಾಡುವ ಮತ್ತು ಹಾಡುಗಳನ್ನು ಸೃಷ್ಟಿಸುವ ಶಕ್ತಿಯನ್ನು ನೋಡಿ ಮುಗ್ಧನಾಗಿ ಅವನನ್ನು ಆದರದೊಡನೆ ತನ್ನ ಅನುಚರರ ಶ್ರೇಣಿಯಲ್ಲಿ ಸೇರಿಸಿಕೊಂಡನು.

ರಾಜನು ಬಿ. ಎ. ಪ್ಯಾಸ್ ಮಾಡಿದ್ದನು. ಅವನಲ್ಲಿ ಯಾವ ತರಹದ ಉಚ್ಛೃಂಖಲತೆಯೂ ಇರಲಿಲ್ಲ. ದೊಡ್ಡಮನುಷ್ಯರ ಮಗನಾಗಿದ್ದರೂ ನೇಮದಂತೆ ಸಕಾಲದಲ್ಲಿ ಗೊತ್ತಾದೆಡೆಯಲ್ಲಿ ಸ್ನಾನ-ಪಾನ ಆಹಾರ-ನಿದ್ರೆಗಳನ್ನು ಮಾಡುತ್ತಿದ್ದನು. ಬಿಪಿನ ಕಿಶೋರನ ಸಹವಾಸವು ಅವನಿಗೊಂದು ದುರ್ವ್ಯಸನದಂತೆ ಪರಿಣಮಿಸಿತು. ಅವನ ಹಾಡುಗಳನ್ನು ಕೇಳುತ್ತ ಮತ್ತು ಅವನು ರಚಿಸಿದ ಗೀತ ನಾಟ್ಯಗಳ ವಿಷಯವಾಗಿ ಚರ್ಚೆ ಮಾಡುತ್ತಾ ಅನ್ನವು ತಣ್ಣಗಾಗುತ್ತಿತ್ತು; ರಾತ್ರಿಯು ಮುಂದುವರಿಯುತ್ತಿತ್ತು. ಜವಾನರು ನಿಯಮ

ತಪ್ಪದ ಸ್ವಭಾವವುಳ್ಳ ತಮ್ಮ ಯಜಮಾನರ ಚರಿತ್ರದೋಷಗಳಲ್ಲಿ ಕೇವಲ ಈ ಬಿಪಿನ ಕಿಶೋರನಲ್ಲಿ ಅತ್ಯಾಸಕ್ತಿಯೆಂದು ಹೇಳತೊಡಗಿದರು.

ರಾಣೀ ವಸಂತಕುಮಾರಿಯು ಗಂಡನನ್ನು ಗದರಿಸುತ್ತಾ- ಎಲ್ಲಿಯದೋ ಒಂದು ನಿರ್ಭಾಗ್ಯ ಕಪಿಯನ್ನು ತಂದು ಮೈಯನ್ನು ಮಣ್ಣುಪಾಲು ಮಾಡುತ್ತಿ ರುವಿರಿ. ಅವನನ್ನು ದೂರ ಓಡಿಸಿದರೆ ನನ್ನ ತಲೆಯ ಭಾರವು ಕಡಿಮೆಯಾ ಗುವುದು ಎಂದು ಹೇಳಲಾರಂಭಿಸಿದಳು.

ಯುವತಿ ಸ್ತ್ರೀಯ ಈರ್ಷೆಯನ್ನು ಕಂಡು ರಾಜನು ಒಳಗೊಳಗೆ ಆನಂದಿ ಸಿದನು.—ಆನಂದದಿಂದ ನಗುತ್ತಿದ್ದನು. ಹೆಂಗಸರು ಯಾವನನ್ನು ಪ್ರೀತಿಸು ವರೋ ಕೇವಲ ಅವರನ್ನು ಮಾತ್ರ ಬಲ್ಲರು. ಜಗತ್ತಿನ ಆದರಕ್ಕೆ ಪಾತ್ರರಾ ದವರು ಹಲವು ಗುಣವಂತರಿರುವರು ಎಂಬುದು ಸ್ತ್ರೀಯರ ಶಾಸ್ತ್ರದಲ್ಲಿ ಬರೆಯ ಲ್ಪಟ್ಟಿಲ್ಲ. ಅವರ ಕಿವಿಯಲ್ಲಿ ಯಾರು ವಿವಾಹದ ಮಂತ್ರಗಳನ್ನು ಉಚ್ಚರಿಸು ವರೋ ಎಲ್ಲ ಸದ್ಗುಣಗಳು ಅವರಲ್ಲೇ ಮತ್ತು ಎಲ್ಲ ಆದರವೂ ಅವರಿಗೇ ಮೀಸಲು. ಗಂಡನ ಊಟದ ವೇಳೆಯಲ್ಲಿ ಅರ್ಧ ಗಂಟೆ ಆಲಸ್ಯವಾಗಲು ಸಹಿಸಲಾರರು. ಗಂಡನ ಆಶ್ರಿತನನ್ನು ದೂರ ತೊಲಗಿಸಿದರೆ ಆ ಬಡಪಾಯಿಗೆ ಒಂದು ಹಿಡಿ ಕೂಳು ಸಿಕ್ಕುವುದು ಕಷ್ಟವೆಂಬ ವಿಷಯದಲ್ಲಿ ಅವರುಗಳಿಗೆ ಸಂಪೂರ್ಣ ಉದಾಸೀನತೆ. ಸ್ತ್ರೀಯರ ಈ ವಿವೇಚನಾಹೀನ ಪಕ್ಷಪಾತವು ದೂಷಣೀಯವಾಗಿರಬಹುದು. ಆದರೆ ಚಿತ್ತರಂಜನನಿಗೆ ಇದು ಸಂಪೂರ್ಣ ಅಪ್ರೀತಿಕರವೆಂದು ತೋರಲಿಲ್ಲ. ಅದರಿಂದ ಅವನು ಆಗಾಗ್ಗೆ ಹೆಚ್ಚು ಆಳತಿ ಯಲ್ಲಿ ಬಿಪಿನನ ಗುಣಗಾನ ಮಾಡಿ ಹೆಂಡತಿಗೆ ಹುಚ್ಚುಹಿಡಿಸುತ್ತಿದ್ದನು. ಮತ್ತು ಅದರಿಂದ ಅತ್ಯಾನಂದವನ್ನು ಅನುಭವಿಸುತ್ತಿದ್ದನು.

ಈ ರಾಜಕೀಯ ನಡವಳಿಕೆಯು ಬಡಪಾಯಿ ಬಿಪಿನನಿಗೆ ಅನುಕೂಲ ವನ್ನುಂಟುಮಾಡಲಿಲ್ಲ. ಅಂತಃಪುರದಲ್ಲಿ ವಿಮುಖತೆಯಿಂದ ಅವನ ಆಹಾರಾದಿ ಗಳ ಏರ್ಪಾಡಿನಲ್ಲಿ ಪದೇ ಪದೇ ಮುಳ್ಳು ಬೀಳತೊಡಗಿತು. ಧನಿಕರ ಮನೆಯ ಭೃತ್ಯರು ಆಶ್ರಿತರ ವಿಷಯದಲ್ಲಿ ಸ್ವಭಾವತಃ ಪ್ರತಿಕೂಲರು. ಅವರುಗಳು ರಾಣಿಯ ಕೋಪದಿಂದ ಧೈರ್ಯಹೊಂದಿ ಒಳಗೊಳಗೆ ಬಿಪಿನನನ್ನು ಹಲವು ವಿಧಗಳಲ್ಲಿ ಅನಾದರ ಮಾಡುತ್ತಿದ್ದರು.

ರಾಣಿಯು ಒಂದು ದಿನ ಒಬ್ಬ ಆಳನ್ನು ಗದರಿಸುತ್ತ—"ನೀನು ಯಾವ ಕೆಲಸ ಮಾಡುವುದನ್ನೂ ಕಾಣೆ. ದಿನವೆಲ್ಲಾ ನೀನೇನು ಮಾಡುತ್ತೀಯೆ'' ಎಂದಳು.

ಅದಕ್ಕವನು " ರಾಜರ ಅಪ್ಪಣೆಯಂತೆ ಬಿಪಿನ್ ಬಾಬುಗಳ ಸೇವೆಯಲ್ಲೇ ನನಗೆ ದಿನವು ಕಳೆಯುತ್ತಿದೆ" ಎಂದು ಹೇಳಿದನು—ರಾಣಿಯು "ಸರಿ, ಬಿಪಿನ್ ಬಾಬುಗಳೇನು ನವಾಬರಾಗಿಬಿಟ್ಟಿದ್ದಾರೆ ! " ಎಂದಳು.

ಮಾರನೇ ದಿನದಿಂದ ಆಳು ಬಿಪಿನನ ಎಂಜಲನ್ನು ಹಾಗೆಯೇ ಬಿಟ್ಟಿರುತ್ತಿದ್ದನು. ಹಲವು ಸಮಯಗಳಲ್ಲಿ ಅವನ ಊಟವನ್ನು ಮುಚ್ಚಿಡುತ್ತಲೂ ಇರಲಿಲ್ಲ. ಅಭ್ಯಾಸವಿಲ್ಲದ ಕೈಯಿಂದ ಬಿಪಿನನು ತನ್ನ ತಟ್ಟೆಯನ್ನು ತಾನೇ ತೊಳೆಯಲಾರಂಭಿಸಿದನು. ಮತ್ತು ಮಧ್ಯೆ ಮಧ್ಯೆ ಉಪವಾಸ ಮಾಡಿದನು. ಆದರೆ ಈ ವಿಷಯವಾಗಿ ರಾಜನಲ್ಲಿ ದೂರು ಹೇಳುವುದು ಅವನ ಸ್ವಭಾವಕ್ಕೆ ವಿರುದ್ಧವಾಗಿತ್ತು. ಯಾವನಾದರೊಬ್ಬ ಆಳಿನ ಸಂಗಡ ಜಗಳವಾಡಿ ಅವನು ತನ್ನ ಗೌರವವನ್ನು ಕಳೆದುಕೊಳ್ಳಲಿಲ್ಲ. ಈ ರೀತಿಯಲ್ಲಿ ಬಿಪಿನನ ಅದೃಷ್ಟಕ್ಕೆ ಅಂಗಳದಲ್ಲಿ ಆದರವು ಹೆಚ್ಚುತ್ತಲೂ ಅಂತಃಪುರದಲ್ಲಿ ಅನಾದರಣೆ ಎಲ್ಲೆಯಿಲ್ಲದೆ ಬೆಳೆಯಲೂ ತೊಡಗಿತು.

ಇತ್ತ ಸುಭದ್ರಾಹರಣ ನಾಟಕವು ರಿಹರ್ಸಲ್ ಆಗಿ ಸಿದ್ಧವಾಯಿತು. ಅರಮನೆಯ ಅಂಗಳದಲ್ಲಿ ಅದರ ಅಭಿನಯವು ನಡೆಯಿತು. ರಾಜನು ಸ್ವತಃ ಕೃಷ್ಣನ ವೇಷವನ್ನು ಧರಿಸಿದ್ದನು. ಬಿಪಿನನು ಅರ್ಜುನನಾಗಿದ್ದನು. ಆಹಾ ! ಅರ್ಜುನನ ಕಂಠವು ಎಂಥಾದ್ದು ! ರೂಪವೂ ಹಾಗೆಯೇ—ನೋಡಿದವರು ಬಾಯಿ ತುಂಬಾ ಹೊಗಳತೊಡಗಿದರು.

ರಾತ್ರಿ ರಾಜನು ಬಂದು ' ಅಭಿನಯವು ಹೇಗಿತ್ತು '? ಎಂದು ವಸಂತಕುಮಾರಿಯನ್ನು ಕೇಳಿದನು.

ರಾಣಿಯು—'ಬಿಪಿನನ ಅರ್ಜುನನ ವೇಷವು ಬಹು ಲಕ್ಷಣವಾಗಿತ್ತು. ಅವನ ಮುಖವು ದೊಡ್ಡವರ ಮಗನಿಗೆ ತಕ್ಕಹಾಗಿದೆ—ಅದಕ್ಕೆ ತಕ್ಕ ಕಂಠವೂ ಇದೆ' ಎಂದಳು.

ಮತ್ತೆ ನನ್ನ ಮುಖ ಲಕ್ಷಣವಿಲ್ಲ ಅಲ್ಲವೇ–ಕಂಠವೂ ಚೆನ್ನಾಗಿಲ್ಲ ಅಲ್ಲವೇ-ಎಂದು ರಾಜನು ಕೇಳಿದನು.

'ನಿಮ್ಮ ಸಂಗತಿ ಬೇರೆ' ಎಂದು ರಾಣಿಯು ಹೇಳಿ ಮತ್ತೆ ಬಿಪಿನನ ಅಭಿನಯವನ್ನು ಹೊಗಳತೊಡಗಿದಳು. ಇದುವರೆಗೂ ರಾಜನು ಇದಕ್ಕಿಂತ ಹೆಚ್ಚು ಉತ್ಸಾಹದ ಭಾಷೆಯಲ್ಲಿ ರಾಣಿಯು ಬಳಿ ಬಿಪಿನನನ್ನು ಹೊಗಳಿದ್ದನು. ಆದರೆ ಇಂದು ರಾಣಿಯ ಬಾಯಿಂದ ಇಷ್ಟು ಮಾತ್ರ ಪ್ರಶಂಸೆಯನ್ನು ಕೇಳಿ ಅವನು ಮನಸ್ಸಿನಲ್ಲಿ ಭಾವಿಸತೊಡಗಿದ್ದೇನೆಂದರೆ—ಬಿಪಿನನ ಶಕ್ತಿ ಏನು ಮಹಾ—ವಿವೇಚನೆಯಿಲ್ಲದವರು ಅವನನ್ನು ಮಿತಿಮೀರಿ ಹೊಗಳುತ್ತಿರುವರು. ಅವನ ಮುಖವೇನು ಮಹಾ—ಕಂಠ ತಾನೇ ಏನು ಅಂತಹ ಅಪೂರ್ವವೋ—ಕೆಲವು ದಿನಗಳ ಹಿಂದೆ ತಾನೂ ಈ ವಿವೇಚನೆಯಿಲ್ಲದವರ ಗುಂಪಿನಲ್ಲಿದ್ದನೆಂಬುದೂ ಅಕಸ್ಮಾತ್ತಾಗಿ ಯಾವ ಕಾರಣದಿಂದ ಅವನ ವಿವೇಚನಾಶಕ್ತಿಯು ವೃದ್ಧಿಯಾಯಿತೆಂಬುದೂ ಅವನಿಗೇ ತಿಳಿಯಲಿಲ್ಲ.

ಮರುದಿನದಿಂದ ಬಿಪಿನನ ಊಟ ಉಪಚಾರಾದಿಗಳಿಗೆ ತಕ್ಕ ಏರ್ಪಾಡಾಯಿತು. ವಸಂತಕುಮಾರಿಯು ರಾಜನೊಡನೆ 'ಬಿಪಿನನಿಗೆ ಕಛೇರಿಯ ಮನೆಯಲ್ಲಿ ಮುತ್ಸದ್ದಿಗಳೊಡನೆ ವಾಸಿಸುವಂತೆ ಏರ್ಪಾಡು ಮಾಡಿರುವುದು ನ್ಯಾಯವಲ್ಲ. ಏನಾದರೇನು, ಒಂದು ಕಾಲದಲ್ಲಿ ಅವನೂ ಉತ್ತಮಸ್ಥಿತಿಯಲ್ಲಿ ಇದ್ದವನಲ್ಲವೇ!'

ರಾಜನು ಸಂಕ್ಷೇಪದಲ್ಲಿ ಮಾತನ್ನು ಹಾರಿಸಿಬಿಟ್ಟು-' ಹೌದು '-ಎಂದನು.

ಮಗುವಿನ ಅನ್ನಪ್ರಾಶನದ ಸಂದರ್ಭದಲ್ಲಿ ಮತ್ತೊಮ್ಮೆ ನಾಟಕದ ಏರ್ಪಾಡು ಮಾಡಿಸಿರೆಂದು ರಾಣಿಯು ಒತ್ತಾಯಪಡಿಸಿದಳು. ರಾಜನು ಅವಳ ಮಾತನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ.

ಒಂದು ದಿನ ಬಟ್ಟೆಗಳನ್ನು ಸರಿಯಾಗಿ ನೆರಿಹಿಡಿದು ಇಟ್ಟಿಲ್ಲವೆಂದು ರಾಜನು ಆಳನ್ನು ಗದರಿಸಲು ಅವನು-'ನಾನೇನು ಮಾಡಲಿ-ರಾಣಿಯವರ ಅಪ್ಪಣೆಯಂತೆ ಬಿಪಿನ ಬಾಬುಗಳ ಪಾತ್ರೆಗಳನ್ನು ಉಜ್ಜುವುದರಲ್ಲೂ, ಇತರ ವಿಧಗಳಲ್ಲಿ ಸೇವೆ ಮಾಡುವುದರಲ್ಲೂ ಹಗಲೆಲ್ಲಾ ಕಳೆಯುತ್ತಿದೆ', ಎಂದನು. ರಾಜನು ಕೋಪಗೊಂಡು-'ಇಶ್-ಬಿಪಿನ್ ಬಾಬುಗಳೇನು ದೊಡ್ಡ ನವಾಬರಾಗಿ ಹೋಗಿರುವರೇ? ತನ್ನ ಪಾತ್ರೆಗಳನ್ನು ತಾನೇ ತೊಳೆದುಕೊಳ್ಳಲಾರನೋ!' ಎಂದನು.

ಬಿಪಿನನು ಪುನರ್ವುರ್ಷಿಕನಾಗಿಬಿಟ್ಟನು.

ಸಂಜೆಯ ಹೊತ್ತಿನಲ್ಲಿ ರಾಜನ ಸಂಗೀತ ಚರ್ಚೆಯ ವೇಳೆಯಲ್ಲಿ ಪಕ್ಕದ ಕೊಠಡಿಯಲ್ಲಿ ಇದ್ದು ಪರದೆಯ ಮರೆಯಲ್ಲಿ ತಾನೂ ಹಾಡನ್ನು ಕೇಳ ಬೇಕೆಂದೂ, ಬಿಪಿನನ ಗಾನವು ಅವಳಿಗೆ ರುಚಿಸುವುದೆಂದೂ ರಾಜನ ಬಳಿ ಒತ್ತಾಯಪಡಿಸಲಾರಂಭಿಸಿದಳು. ಶೀಘ್ರದಲ್ಲೇ ರಾಜನು ಮೊದಲಿನಂತೆ ನಿಯಮ ಪ್ರಕಾರ ಆಹಾರ-ನಿದ್ರೆಗಳನ್ನು ಮಾಡತೊಡಗಿದನು. ಗಾಯನ-ವಾದನಗಳು ಮತ್ತೆ ನಡೆಯಲಿಲ್ಲ.

ರಾಜನು ಮಧ್ಯಾಹ್ನದ ವೇಳೆಯಲ್ಲಿ ಜಮೀನ್ದಾರಿಯ ಕೆಲಸ ನೋಡು ತ್ತಿದ್ದನು. ಒಂದು ದಿನ ಹೊತ್ತಿಗೆ ಮುಂಚೆಯೇ ಅಂತಃಪುರಕ್ಕೆ ಹೋದಾಗ ರಾಣಿಯು ಏನೇನೋ ಓದುತ್ತಿರುವುದನ್ನು ಕಂಡು 'ಅದೇನು ಓದುತ್ತಿರುವೆ' ಎಂದು ಕೇಳಿದನು.

ರಾಣಿಯು ಮೊದಲು ಸ್ವಲ್ಪ ಅಪ್ರತಿಭಳಾಗಿ-' ಬಿಪಿನ್ ಬಾಬುಗಳ ಹಾಡುಗಳ ಪುಸ್ತಕವನ್ನು ತರಿಸಿ ಒಂದೆರಡು ಹಾಡುಗಳನ್ನು ಬಾಯಿಪಾಠ ಮಾಡುತ್ತಿರುವೆನು. ಹಠಾತ್ತಾಗಿ ನಿಮ್ಮ ಅಭಿರುಚಿಯು ಬದಲಾಯಿಸಿಬಿಟ್ಟಿದೆ. ಇನ್ನು ಹಾಡುಗಳನ್ನು ಕೇಳಲು ಅವಕಾಶವಿಲ್ಲವಲ್ಲ' ಎಂದಳು. ಬಹು ದಿನ ಗಳಿಂದ ಈ ಅಭಿರುಚಿಯನ್ನು ಬದಲಾಯಿಸುವುದಕ್ಕಾಗಿ ರಾಣಿಯು ಹಲವು ಪ್ರಯತ್ನಗಳನ್ನು ಮಾಡಿದ್ದಳೆಂಬ ವಿಷಯವನ್ನು ಅವಳಿಗೆ ಯಾರೂ ನೆನಪು ಮಾಡಿ ಕೊಡಲಿಲ್ಲ.

ಮರುದಿನ ರಾಜನು ಬಿಪಿನನನ್ನು ಕಳುಹಿಸಿಕೊಟ್ಟನು. ಮಾರನೇ ದಿನದಿಂದ ಅವನ ಒಂದು ಮುಷ್ಟಿ ಅನ್ನವು ಹುಟ್ಟುವುದೆಲ್ಲಿ ಎಂಬ ವಿಷಯವಾಗಿ ಸ್ವಲ್ಪವೂ ಯೋಚಿಸಲೇ ಇಲ್ಲ.

ಅಷ್ಟಕ್ಕೆ ವ್ಯಸನವಿಲ್ಲ. ಈ ನಡುವೆ ಬಿಪಿನನು ರಾಜನೊಡನೆ ಅಕೃತ್ರಿಮ ಅನುರಾಗದಿಂದ ಬಂಧಿತನಾಗಿಬಿಟ್ಟಿದ್ದನು. ವೇತನಕ್ಕಿಂತ ಹೆಚ್ಚಾಗಿ ರಾಜರ ಸ್ನೇಹವು ಅವನಬಳಿ ಹೆಚ್ಚು ಬೆಲೆಯುಳ್ಳದಾಗಿತ್ತು. ಇವರೆ ಯಾವ ಅಪರಾಧಕ್ಕಾಗಿ ಅಕಸ್ಮಾತ್ತಾಗಿ ರಾಜನ ಪ್ರೀತಿ ವಿಶ್ವಾಸವನ್ನು ಕಳೆದುಕೊಂಡೆ ನೆಂಬ ವಿಷಯವನ್ನು ಅವನು ಎಷ್ಟು ಯೋಚಿಸಿದರೂ ಅವನಿಗೆ ಹೊಳೆಯಲೇ

ಇಲ್ಲ. ದೀರ್ಘವಾಗಿ ನಿಟ್ಟುಸಿರುಬಿಡುತ್ತ ತನ್ನ ಹಳೆಯ ತಂಬೂರಿಗೆ ಗೌಸನ್ನು ಹಾಕಿ ಆಪ್ತ ಮಿತ್ರರೇ ಇಲ್ಲದ ಈ ಬೃಹತ್ ಪ್ರಪಂಚದಲ್ಲಿ ಹೊರಬಿದ್ದನು— ಹೋಗುವ ಸಮಯದಲ್ಲಿ ರಾಜ ಭೃತ್ಯನಿಗೆ ತನ್ನ ಕೈಯಲ್ಲಿದ್ದ ಕೊನೆಯ ಎರಡು ರೂಪಾಯಿಗಳನ್ನು ಇನಾಮಾಗಿ ಕೊಟ್ಟು ಹೋದನು.

---

# ಅಪರಿಚಿತೆ

## ೧

ಇಂದಿಗೆ ನನಗೆ ಇಪ್ಪತ್ತೇಳು ವರ್ಷ ಮಾತ್ರ. ಈ ಬಾಳು ದೀರ್ಘದೃಷ್ಟಿಯಿಂದ ದೊಡ್ಡದಲ್ಲ, ಅಥವಾ ಗುಣದ ದೃಷ್ಟಿಯಿಂದ ವಿಶೇಷವಾದುದೂ ಅಲ್ಲ. ಆದರೂ ಇದರದೊಂದು ವಿಶೇಷ ಮೂಲ್ಯವಿದೆ—ದುಂಬಿಯು ಹೃದಯದ ಮೇಲೆ ಬಂದು ಕುಳಿತ ಹೂವಿನ ಬಳ್ಳಿಯಂತೆ ಇದು. ಪದಕ್ಷೇಪದ ಇತಿಹಾಸವು ಹೂವಿನ ಜೀವನದ ಮಧ್ಯದಲ್ಲಿ ಹೀಚುಕಟ್ಟಿದೆ.

ಆ ಇತಿಹಾಸವು ಆಕಾರದಲ್ಲಿ ಸಣ್ಣದು. ಅದನ್ನು ಸಣ್ಣದಾಗಿಯೇ ಬರೆಯುವೆನು. ಸಣ್ಣದೆಲ್ಲ ಸಾಮಾನ್ಯವೆಂದು ಅವಹೇಳನ ಮಾಡದಿರುವರು ಇದರ ರಸವನ್ನು ಅನುಭವಿಸುವರು.

ಕಾಲೇಜಿನಲ್ಲಿ ಎಷ್ಟು ಪರೀಕ್ಷೆಗಳನ್ನು ಮಾಡಬೇಕೋ ಅದೆಲ್ಲವನ್ನೂ ನಾನು ಮುಗಿಸಿರುವೆನು. ಚಿಕ್ಕಂದಿನಲ್ಲಿ ಸಂಸ್ಕೃತ ಪಂಡಿತರು ನನ್ನ ಸುಂದರ ಮುಖವನ್ನು ಕಂಡು ಶಿರೀಷ ಪುಷ್ಪಕ್ಕೂ ತೊಂಡೇ ಹಣ್ಣಿಗೂ ಹೋಲಿಸಿ ಹಾಸ್ಯಮಾಡುವ ಸುಯೋಗವನ್ನು ಪಡೆದಿದ್ದರು. ಅವರು ಹಾಗೆ ಹೇಳಿದಾಗ ನನಗೆ ಬಲು ನಾಚಿಕೆಯಾಗುತ್ತಿತ್ತು. ಆದರೆ ವಯಸ್ಸಾದ ಮೇಲೆ ಈ ವಿಷಯವನ್ನು ಯೋಚಿಸತೊಡಗಿದೆನು. ಜನ್ಮಾಂತರವಿದ್ದುದೇ ಆದರೆ ಮುಂದಿನ ಜನ್ಮಕ್ಕೆ ನನಗೆ ಸುರೂಪವೂ ನಮ್ಮ ಪಂಡಿತರಿಗೆ ವಿದ್ರೂಪವೂ ಖಂಡಿತ ಉಂಟಾಗುವುದು.

ನಮ್ಮ ತಂದೆಯವರು ಒಂದು ಕಾಲದಲ್ಲಿ ಬಡವರಾಗಿದ್ದರು. ವಕಾಲತ್ತು ನಡೆಸಿ ಅವರು ಅಪಾರ ಹಣವನ್ನು ಸಂಪಾದಿಸಿದರು. ಆದರೆ ಅನುಭವಿಸಲು ಒಂದು ಘಳಿಗೆಯೂ ಅವಕಾಶ ಹೊಂದಲಿಲ್ಲ. ಸಾಯುವಾಗ ಅವರು ನಿಟ್ಟುಸಿರು ಬಿಟ್ಟರಲ್ಲಾ ಅದೇ ಅವರ ಜೀವಮಾನದಲ್ಲಿ ಮೊಟ್ಟಮೊದಲು ಸಿಕ್ಕಿದ ಅವಕಾಶ.

ಆಗ ನನ್ನ ವಯಸ್ಸು ಅಲ್ಪ. ತಾಯಿಯ ಪೋಷಣೆಯಿಂದಲೇ ನಾನು ದೊಡ್ಡವನಾದೆ. ತಾಯಿಯು ಬಡವರ ಮನೆಯಲ್ಲಿ ಹುಟ್ಟಿದವಳು. ನಾವು ಈಗ ಧನಿಕರೆಂಬ ವಿಷಯುವನ್ನು ಅವಳ ಮರೆಯಲಿಲ್ಲ. ನನಗೂ ಮರೆಯಲು ಅವಕಾಶ ಕೊಡಲಿಲ್ಲ. ಚಿಕ್ಕಂದಿನಲ್ಲಿ ನಾನು ಅವಳ ತೊಡೆಯಮೇಲೆಯೇ ಬೆಳೆದೆನು. ಪ್ರಾಯಶಃ ಅದರಿಂದಲೇ ಕೊನೆಯವರೆಗೆ ನನಗೆ ಪೂರ್ತಾ ವಯಸ್ಸೇ ಆಗಲಿಲ್ಲವೋ ಏನೋ—ಇಂದಿಗೂ ನನ್ನನ್ನು ನೋಡಿದವರಿಗೆ ನಾನು ಅನ್ನಪೂರ್ಣೆಯ ತೊಡೆಯ ಮೇಲಿರುವ ಗಜಾನನ ಚಿಕ್ಕ ತಮ್ಮನಂತೆ ಕಾಣಿಸುವನು.

ನನ್ನ ನಿಜವಾದ ಪೋಷಕರು ನನ್ನ ಸೋದರಮಾವ. ಅವರು ನನಗಿಂತ ಬಹಳ ಎಂದರೆ ಆರೇಳು ವರ್ಷ ದೊಡ್ಡವರು. ಆದರೂ ಫಲ್ಗುನೀ ನದಿಯ ಮರಳಿನಂತೆ ನಮ್ಮ ಸಂಸಾರವನ್ನೆಲ್ಲಾ ತಮ್ಮೊಳಗೆ ಅಡಗಿಸಿಕೊಂಡು ಬಿಟ್ಟಿದ್ದರು. ಅವರನ್ನು ಚುಚ್ಚಿದಲ್ಲದೆ ಒಂದು ಗುಟುಕು ರಸವೂ ದೊರೆಯುವ ಸಾಧ್ಯವಿರಲಿಲ್ಲ. ಆದ್ದರಿಂದ ಯಾವ ವಿಷಯವನ್ನೂ ನಾನಾಗಿ ಯೋಚಿಸುವ ಆವಶ್ಯಕತೆಯೇ ಇರಲಿಲ್ಲ.

ಹೆಣ್ಣು ಹೆತ್ತವರು ಮಾತ್ರವೇ ನಾನು ಸತ್ಪಾತ್ರನೆಂದು ಒಪ್ಪತಕ್ಕವರು. ಹೊಗೆಸೊಪ್ಪು ಸೇದುವ ಅಭ್ಯಾಸ ಕೂಡ ನನಗೆ ಇರಲಿಲ್ಲ. ಸಭ್ಯನಾಗಲು ನನಗೆ ಯಾವ ತೊಡಕೂ ಇರಲಿಲ್ಲ. "ಆದ್ದರಿಂದಲೇ ನಾನು ಹದಿನಾರಾಣೆ ಸಾಭ್ಯಸ್ಥ." ತಾಯಿಯು ಇಟ್ಟ ಗೆರೆಯನ್ನು ಮೀರದೆ ನಡೆಯುವ ಪದ್ಧತಿಯು ನನ್ನಲ್ಲಿದೆ. ಅಂದರೆ ಗೆರೆಯನ್ನು ಮೀರುವ ಶಕ್ತಿಯು ನನಗೆ ಇಲ್ಲವೇ ಇಲ್ಲ. ಅಂತಃಪುರದ ಶಾಸನದಂತೆ ನಡೆದುಕೊಳ್ಳುವ ಹಾಗೆ ನಾನು ತಯಾರಾಗಿರುವೆನು. ಯಾರಾದರೂ ಕನ್ಯೆಯು ಸ್ವಯಂವರೆಯಾಗುವವಳಿದ್ದರೆ ಆಕೆಯು ಈ ಸಂಗತಿಯನ್ನು ನೆನಪಿಡಲಿ.

ಬಹುಜನ ಧನಿಕರ ಮನೆಯಿಂದ ನನಗೆ ಹೆಣ್ಣು ಕೊಡಲು ಬಂದಿದ್ದರು. ಆದರೆ ಪ್ರಪಂಚದಲ್ಲಿ ನನ್ನ ಭಾಗ್ಯದೇವತೆಯ ಛೀಫ್ ಏಜಂಟು ನನ್ನ ಸೋದರಮಾವನು—ಆತನೇ ಒಪ್ಪಲಿಲ್ಲ. ಮದುವೆಯ ವಿಷಯದಲ್ಲಿ ಅವನದೊಂದು ವಿಶೇಷ ಅಭಿಪ್ರಾಯವಿತ್ತು. ಧನಿಕರ ಹುಡುಗಿಯನ್ನು ಅವನು ಒಪ್ಪುತ್ತಿರಲಿಲ್ಲ. ನಮ್ಮ ಮನೆಗೆ ಬರುವ ಹೆಣ್ಣು ತಲೆ ತಗ್ಗಿಸಿ

ಕೊಂಡು ಬರಬೇಕೆಂಬುದು ಅವನ ಇಷ್ಟ. ಹಣವಿಲ್ಲದಿದ್ದರೂ ಧಾರಾಳವಾಗಿ ಹಣ ದೊರಕಿಸಲು ಹಿಂಜರಿಯದಂತ ಬೀಗರನ್ನು ಅವನು ನಿರೀಕ್ಷಿಸುತ್ತಿದ್ದನು. ಯಾರನ್ನು ಹಿಂಡಿದರೆ ಪ್ರಯೋಜನವಾಗುವುದೋ ; ಆದರೆ ನಮ್ಮ ಮನೆಗೆ ಬಂದಾಗ ಮಾತ್ರ ಖಾಸಾ ವೀಳ್ಯಕ್ಕೆ ಬದಲು ಖರ್ಚಿ ವೀಳ್ಯ ಕೊಟ್ಟರೂ ಆಕ್ಷೇಪಣೆ ಮಾಡರೋ ಅಂತಹ ಬೀಗರನ್ನು ಹುಡುಕುತ್ತಿದ್ದನು.

ನನ್ನ ಸ್ನೇಹಿತ ಹರೀಶನು ಕಾನ್‌ಪುರದಲ್ಲಿ ಕೆಲಸವಾಡುತ್ತಿದ್ದನು. ಅವನು ರಜದಲ್ಲಿ ಕಲ್ಕತ್ತೆಗೆ ಬಂದು ನನ್ನ ಮನಸ್ಸನ್ನು ತಲ್ಲಣ ಗೊಳಿಸಿದನು— 'ಲೋ ! ಮದುವೆಯಾಗುವುದಾದರೆ ಹೇಳು ಚಿನ್ನದಂತಹ ಹೆಣ್ಣಿದೆ ' ಎಂದನು.

ಕೆಲವು ದಿನ ಹಿಂದೆ ಎಮ್. ಎ. ಪಾಸ್ ಮಾಡಿದ್ದೆನು. ಮುಂದೆ ಕೆಲಸವೇನು ಇರಲಿಲ್ಲ. ಪರೀಕ್ಷೆಯಿಲ್ಲ ; ಉದ್ಯೋಗವಿಲ್ಲ. ಸ್ವಂತ ಆಸ್ತಿಯನ್ನು ನೋಡಿಕೊಳ್ಳಬೇಕೆಂಬ ಯೋಚನೆಯೂ ಇಲ್ಲ ; ಆಸಕ್ತಿಯೂ ಇಲ್ಲ, ಮತ್ತು ಇದ್ದದ್ದೆಲ್ಲಾ ಮನೆಯಲ್ಲಿ ತಾಯಿಯ ಆಡಳಿತ; ಹೊರಗೆ ಮಾವನ ಅಧಿಕಾರ.

ಈ ಬಿಡುವಿನ ಮರುಭೂಮಿಯಲ್ಲಿ ನನ್ನ ಹೃದಯವು ಆಗ ವಿಶ್ವವ್ಯಾಪೀ ನಾರೀ ರೂಪದ ಹಗಲುಗನಸನ್ನು ಕಾಣುತ್ತಿತ್ತು. ಆಕಾಶದಲ್ಲಿ ಅವಳ ದೃಷ್ಟಿ, ವಾಯುವಿನಲ್ಲಿ ಅವಳ ಉಚ್ಛ್ವಾಸ, ಗಿಡಗಳ ಶಬ್ದದಲ್ಲಿ ಅವಳ ಗುಪ್ತ ಮಾತು ಕಥೆಗಳು, ಇವು ನನ್ನನ್ನು ಸ್ಪರ್ಶಿಸುತ್ತಿದ್ದುವು.

ಇಂತಹ ಸಮಯದಲ್ಲಿ ಹರೀಶನು ಬಂದು "ಹೆಣ್ಣು ಬೇಕಾದದ್ದೇ ಆದರೆ....ಹೇಳು...." ಎಂದು ಮುಂತಾಗಿ ನನಗೆ ಹೇಳಿದನು. ಮನಸ್ಸು ವಸಂತ ವಾಯುವಿನಲ್ಲಿ ಬಕುಲವನದ ಹೊಸ ಎಲೆಗಳಂತೆ ಚಂಚಲವಾಯಿತು. ಹರೀಶನು ರಸಿಕ. ರಸ ಭಂಗವಾಗದಂತೆ ವರ್ಣಿಸಬಲ್ಲನು. ನನ್ನ ಮನಸ್ಸೂ ಹಾತೊರೆಯುತ್ತಿತ್ತು. ನಾನು ಹರೀಶನನ್ನು ಕರೆದು—'ಒಂದು ಸಲ ಮಾವನ ಹತ್ತಿರ ಈ ಪ್ರಸ್ತಾಪವೆತ್ತಬಾರದೇ—' ಎಂದೆನು.

ಹರೀಶನು ಮಾತನಾಡಿ ಮರಳು ಮಾಡುವುದರಲ್ಲಿ ನುರಿತ ಕೈ. ಆದ್ದರಿಂದಲೇ ಅವನೆಲ್ಲಿ ಹೋದರೂ ಆದರಿಸುತ್ತಿದ್ದರು. ಅವನು ಕೈಗೆ ಸಿಕ್ಕಿದಾಗ ಮಾವನೂಕೂಡ ಸುಲಭದಲ್ಲಿ ಬಿಡುತ್ತಿರಲಿಲ್ಲ. ಸಂಗತಿಯು ಅವನ ಕಿವಿ

ಯನ್ನು ಮುಟ್ಟಿತು. ಹುಡುಗಿಗಿಂತ ಹುಡುಗಿಯ ತಂದೆಯ ಸುದ್ದಿ ಕೇಳುವುದ ರಲ್ಲಿ ಅವನಿಗೆ ಹೆಚ್ಚು ಆಸಕ್ತಿ. ತಂದೆಯ ಪರಿಸ್ಥಿತಿಯೂ ಅವನು ಕೋರು ತ್ತಿದ್ದಂತೆಯೇ ಇತ್ತು. ಒಂದು ಕಾಲದಲ್ಲಿ ಇವರ ಮನೆತನದಲ್ಲಿ ಲಕ್ಷ್ಮಿಯ ಮಂಗಳ ಕಲಶವು ತುಂಬಿ ಇತ್ತು. ಈಗ ಅದು ಬರಿದಾಗಿದ್ದರೂ ತಳದಲ್ಲಿ ಸ್ವಲ್ಪ ಉಳಿದಿದೆ. ದೇಶದಲ್ಲಿ ವಂಶದ ಮರ್ಯಾದೆಯನ್ನು ಉಳಿಸಿಕೊಂಡು ಬದುಕುವುದು ಅಸಾಧ್ಯವೆಂದು ನಿಶ್ಚಯಿಸಿ ಅವರು ಪಶ್ಚಿಮಕ್ಕೆ ಹೋಗಿ ಕಾನ್‌ಪುರದಲ್ಲಿ ಬಡ ಗೃಹಸ್ಥರಂತೆ ಸಂಸಾರ ಮಾಡಿಕೊಂಡಿರುವರಂತೆ—ಒಬ್ಬ ಮಗಳಲ್ಲದೆ ಅವರಿಗಿನ್ನಾರೂ ಇಲ್ಲ. ಅವರ ನಂತರ ಲಕ್ಷ್ಮಿಯ ಕಲಶದಲ್ಲಿ ಅಲ್ಪ ಸ್ವಲ್ಪ ಉಳಿದಿರುವುದನ್ನು ಸಂಪೂರ್ಣವಾಗಿ ಮಗಳು—ಅಳಿಯನಕೈಲಿ ಸುರಿದುಹೋಗಲು ಯಾವ ಅಭ್ಯಂತರವೂ ಇಲ್ಲ.

ಇದೆಲ್ಲ ಒಳ್ಳೆಯ ಸುದ್ದಿಯೇ. ಆದರೆ ಹುಡುಗಿಯ ವಯಸ್ಸು ಹದಿನೈದಾಗಿದೆಯೆಂದು ಮಾವನ ಮನಸ್ಸಿಗೆ ಸ್ವಲ್ಪ ಭಾರವಾಯಿತು. ವಂಶ ದಲ್ಲಂತೂ ಏನೇನೂ ದೋಷವಿಲ್ಲ. ತಂದೆಯು ಮಗಳಿಗೆ ಯೋಗ್ಯನಾದ ವರನನ್ನು ಹುಡುಕಿಯೂ ಸಿಕ್ಕಲಿಲ್ಲ. ಒಂದು ವರಗಳ ಸಂತೆಯಲ್ಲಿ ಮಹಾ ಅರ್ಘ್ಯವನ್ನು ಒಪ್ಪಿಸಬೇಕು. ಹಾಗೆಯೇ ಹೆಣ್ಣಿನ ತಂದೆಯೂ ಜನಕನಂತೆ ತನ್ನ ಮಗಳಿಗೆ ರಾಮನನ್ನೇ ಹುಡುಕುತ್ತಿದ್ದನು. ತಂದೆಗೇನೂ ಇವೆಲ್ಲ ಕಟ್ಟಿಕೊಂಡು ಸಾವಕಾಶವಾಗಿರಬಹುದು, ಆದರೆ ಹುಡುಗಿಯ ವಯಸ್ಸು ಮುಂದುವರಿಯದೇ ಸಾವಕಾಶ ಮಾಡುವುದೇ.

ಹಾಗೂ ಹೀಗೂ ಹರೀಶನ ಸರಸಜಿಹ್ವೆಯಿಂದ ಮಾವನ ಮನಸ್ಸು ಕರಗಿತು. ಮದುವೆಯ ಪ್ರಸ್ತಾಪದ ಮೊದಲನೆಯ ಅಂಕವು ನಿರ್ವಿಘ್ನವಾಗಿ ನಡೆಯಿತು. ಕಲಿಕತ್ತೆಯ ಹೊರಗಿನ ಭೂಭಾಗವೆಷ್ಟಿದೆಯೋ ಅದೆಲ್ಲವನ್ನೂ ಮಾವನು ಅಂಡಮಾನ್ ದ್ವೀಪಕ್ಕೆ ಸೇರಿದುದು ಎಂದು ನಿರ್ಧರಿಸಿದ್ದನು. ಜೀವಮಾನದಲ್ಲೇ ಒಮ್ಮೆ ಒಂದು ಬಹು ಮುಖ್ಯ ಕೆಲಸಕ್ಕಾಗಿ ಅವನು ಕೊನ್ನಾಗರಕ್ಕೆ ಹೋಗಿದ್ದನು. ಮಾವನೇನಾದರೂ ಮನುವಾಗಿದ್ದಿದ್ದರೆ ಹೌರಾ ಸೇತುವೆಯನ್ನು ದಾಟಿ ಹೋಗುವುದು ನಿಷಿದ್ಧವೆಂದು ತನ್ನ ಧರ್ಮ ಶಾಸ್ತ್ರದಲ್ಲಿ ಬರೆದಿಡುತ್ತಿದ್ದನು. ಸ್ವತಃ ಹೋಗಿ ಹುಡುಗಿಯನ್ನು ನೋಡಿ ಬರಬೇಕೆಂದು ನನಗೆ ಆಶೆಯಿತ್ತು. ಆದರೆ ಆ ವಿಷಯವನ್ನು ಮಾವನಿದಿರಿನಲ್ಲಿ

ಪ್ರಸ್ತಾಪಿಸುವಷ್ಟು ಧೈರ್ಯವಾಗಲಿಲ್ಲ. ಹುಡುಗಿಯನ್ನು ನೋಡಿಕೊಂಡು ಬರುವುದಕ್ಕಾಗಿ ನಮ್ಮ ದೊಡ್ಡಮ್ಮನ ಮಗ—'ವಿನೂದಾದ'ನನ್ನು ಕಳುಹಿಸಿದ್ದರು. ಅವನ ಅಭಿಪ್ರಾಯ, ಅಭಿರುಚಿ ಮತ್ತು ದಕ್ಷತೆಯಲ್ಲಿ ನನಗೆ ಹದಿನಾರಾಣೆ ನಂಬಿಕೆ. 'ವಿನೂ' ಹೋಗಿಬಂದು "ಹುಡುಗಿ ಚೆನ್ನಾಗಿದೆ—ಅಪರಂಜಿಯಂತಹ ಹೆಣ್ಣು—" ಎಂದನು. ಅವನ ಭಾಷೆಯು ಬಲು ತೂಕ ಮಾಡಿದ್ದು. ನಾವು 'ಬಲು ಚಂದ' ವೆಂದು ಹೇಳಿದೆಡೆ ಅವನು—ಸರಿ 'ಇದೆ ಸಾಮಾನ್ಯವಾಗಿ' ಎಂದು ಹೇಳುವ ಪದ್ಧತಿ—ಈ ಕಾರಣಗಳಿಂದ ನನ್ನ ಅದೃಷ್ಟ ಚಕ್ರದಲ್ಲಿ ಬ್ರಹ್ಮನಿಗೂ ಮನ್ಮಥನಿಗೂ ಏನೂ ವಿರೋಧ ವಿಲ್ಲವೆಂದು ನಿರ್ಧರ ಮಾಡಿಕೊಂಡೆನು.

೨

ಮದುವೆಗೋಸ್ಕರ ಹೆಣ್ಣಿನ ಕಡೆಯವರೇ ಕಲ್ಕತ್ತೆಗೆ ಬರಬೇಕಾಯಿತೆಂಬುದನ್ನು ಹೇಳಬೇಕಾದ್ದಿಲ್ಲ—ಹುಡುಗಿಯ ತಂದೆಗೆ ಹರೀಶನಲ್ಲಿ ಎಷ್ಟು ನಂಬಿಕೆಯಿತ್ತೆಂದರೆ ಮದುವೆಗೆ ಮೂರು ದಿನ ಮುಂಚಿನವರೆಗೆ ನನ್ನನ್ನು ನೋಡಲು ಬರಲಿಲ್ಲ. ಮೂರೇ ದಿನಗಳ ಹಿಂದೆ ಬಂದು ನನ್ನನ್ನು ನೋಡಿ ಆಶೀರ್ವಾದ ಮಾಡಿದ್ದರು. ಅವರಿಗೆ ಹೆಚ್ಚುಕಮ್ಮಿ ನಲವತ್ತುವರ್ಷ ವಯಸ್ಸಿರಬಹುದು. ತಲೆಯ ಕೂದಲು ಕಪ್ಪಾಗಿತ್ತು. ಗಡ್ಡ ಮೀಸೆಗಳಲ್ಲಿ ಮಾತ್ರ ಒಂದೊಂದು ನರೆಗೂದಲು ಇತ್ತು. ನೋಡುವುದಕ್ಕೂ ಲಕ್ಷಣವಾಗಿದ್ದರು. ಗುಂಪಿನಲ್ಲಿ ಅವರೇನಾದರೂ ನಿಂತಿದ್ದರೆ ಎಲ್ಲರಿಗಿಂತ ಮುಂಚೆ ಅವರ ಮೇಲೆ ಜನರ ದೃಷ್ಟಿ ಬೀಳುತ್ತಿತ್ತು.

ನನ್ನನ್ನು ಕಂಡು ಅವರು ಸಂತೋಷಪಟ್ಟೇ ಇರಬೇಕೆಂದು ನಾನೆಣಿಸುತ್ತೇನೆ. ನಿರ್ಧರವಾಗಿ ಹೇಳುವುದು ಅಸಾಧ್ಯ. ಯಾಕೆಂದರೆ ಅವರು ಬಾಯಿಬಿಟ್ಟು ಮಾತನಾಡುವ ಮನುಷ್ಯರೇ ಅಲ್ಲ. ಮಾವನ ಬಾಯಿಗಂತೂ ತಡೆಯೇ ಇರಲಿಲ್ಲ. ಧನದಲ್ಲಿ, ಮಾನ ಮರ್ಯಾದೆಯಲ್ಲಿ ನಮ್ಮ ಮನೆಯವರು ಊರಿನಲ್ಲಿ ಯಾರಿಗೂ ಕೀಳಲ್ಲವೆಂಬ ಸಂಗತಿಯನ್ನು ಅವನು ಹಲವು ವಿಧಗಳಲ್ಲಿ ಅಂದು ತೋರಿಸಿದ್ದನು. ಶಂಬುನಾಥಬಾಬುಗಳಂತೂ ಈ ಮಾತುಗಳನ್ನು ಕೇಳಿದಾಗ ಪಿಟ್ ಪಟ್ ಅನ್ನಲಿಲ್ಲ. ನಾನಾಗಿದ್ದರೆ ಬಾಯಿ ಮುಚ್ಚಿಕೊಳ್ಳು

ತ್ತಿದ್ದೆ. ಆದರೆ ಮಾವನ ಬಾಯಿಗೆ ಬೀಗ ಹಾಕುವುದು ಮಹಾ ಕಷ್ಟ. ಶಂಭುನಾಥಬಾಬುಗಳು ಮೌನವಾಗಿರುವುದನ್ನು ಕಂಡು ಮನುಷ್ಯನು 'ಶುದ್ಧ ನಿರ್ಜೀವದವ' ಎಂದು ನಿರ್ಧರಿಸಿದನು. ಏನೇನೂ ಜೋರಿಲ್ಲದವರು ಎಂದು ನಿರ್ಧರಿಸಿದನು. ಹೆಣ್ಣು ಕೊಟ್ಟವರು ಜೋರಾಗಿರುವುದು ತಪ್ಪೆಂದು ಅವನು ನಿರ್ಧರಿಸಿದ್ದನು. ಶಂಭುನಾಥಬಾಬುಗಳು ಮನೆಗೆ ಹೊರಟಾಗ ಮಾವನು ಗಾಡಿಯ ವರೆಗೆ ಹೋಗಿಯೂ ಅವರನ್ನು ಬೀಳ್ಕೊಡದೆ ಕುಳಿತಲ್ಲಿಂದ ಉಪಚಾರ ಹೇಳಿ ಕಳುಹಿಸಿಬಿಟ್ಟನು.

ಹೆಣ್ಣು ಗಂಡುಗಳಿಗೆ ಕೊಡಬೇಕಾದ ಒಡವೆ ವಸ್ತುಗಳ ವಿಷಯ ವೆಲ್ಲಾ ನಿರ್ಧರವಾಗಿತ್ತು. ಮಾವನು ತಾನು ಅಸಾಮಾನ್ಯ ಚತುರನೆಂದು ಎಣಿಸಿಕೊಂಡಿದ್ದನು. ಮಾತು ಕಥೆಗಳಲ್ಲಿ ಎಲ್ಲೂ ಎಳ್ಳಷ್ಟೂ ಬಾಕಿ ಯಿಟ್ಟಿರಲಿಲ್ಲ. ಹಣದ (ವರದಕ್ಷಿಣೆಯ) ಮೊಬಲಗು ನಿರ್ಧರವಾಗಿಯೇ ಇದ್ದು, ಹೆಣ್ಣಿಗೆ ಏನೇನು ಒಡವೆ ಹಾಕಬೇಕು, ಎಷ್ಟು ನೇರು ಭಂಗಾರದಲ್ಲಿ ಒಡವೆ ಮಾಡಿಸಬೇಕು ಎಂಬುದೂ ನಿರ್ಧರವಾಗಿತ್ತು. ನಾನಂತೂ ಈ ಮಾತುಕಥೆಗಳು ನಡೆದಾಗ ಅಲ್ಲಿರಲಿಲ್ಲ. ಕೊಡುವುದು ತೆಗೆದುಕೊಳ್ಳುವುದು ಇವುಗಳ ವಿಷಯ ನಾನೇನೂ ಅರಿಯೆ. ಈ ಸಣ್ಣ ವಿಷಯವೂ ಮದುವೆಯಲ್ಲಿ ಒಂದು ಮಹತ್ವದ್ದೆಂಬುದನ್ನು ನಾನು ಅರಿತಿದ್ದೆ. ಆದರೆ ಈ ಅಂಶದ ಭಾರ ವನ್ನು, ಜವಾಬ್ದಾರಿಯನ್ನು ಹೊತ್ತಿದ್ದವರು ಯಾರೋ ಅವರು ಒಂದು ಗುಲ ಗಂಜಿಯಷ್ಟೂ ಮೋಸ ಹೋಗರೆಂಬುದೂ ನನಗೆ ಗೊತ್ತಿತ್ತು. ನಿಜಸ್ಥಿತಿ ಯೇನೆಂದರೆ—ಸಂಪೂರ್ಣವಾಗಿ ವ್ಯವಹಾರ ಜ್ಞಾನವುಳ್ಳವನೆಂದು ಮಾಮನಲ್ಲಿ ನಮಗೆಲ್ಲ ಬಹು ಆದರ. ನಮ್ಮ ವಿಷಯವಾಗಿ ಎಲ್ಲಿಯಾದರೂ ಎಳ್ಳಷ್ಟು ಆದಾಯಕ್ಕೆ ದಾರಿಯಿದ್ದರೆ ಮಾವನು ತನ್ನ ಬುದ್ಧಿ ಶಕ್ತಿಯಿಂದ ಹದಿನಾರಾಣೆ ಲಾಭವನ್ನು ಉಂಟುಮಾಡಿದಲ್ಲದೆ ಬಿಡನೆಂಬುದು ನಮಗೆಲ್ಲ ಖಂಡಿತವಾಗಿ ತಿಳಿದಿತ್ತು. ಇದರಿಂದ ನಮಗೇನು ನಷ್ಟವಿಲ್ಲದಿದ್ದರೂ, ಇತರರಿಗೆ ನಷ್ಟ ಉಂಟಾಗುವ ಸಂದರ್ಭವಿದ್ದರೂ ಯಾರು ಹೇಗಾದರೂ ಹೋಗಲಿ ಮಾವನು ತನ್ನ ಹಣವನ್ನು ಬಿಡನೆಂಬುದು ಎಲ್ಲರಿಗೂ ಗೊತ್ತಿದ್ದ ವಿಷಯ.

ಲಗ್ನಪತ್ರಿಕೆಯು ಆಗುವ ವೇಳೆಯಲ್ಲಿ ನಡೆದ ಆಡಂಬರಕ್ಕೆ ಅಳತೆಯೇ ಇಲ್ಲ. ನಮ್ಮ ಮನೆಯಿಂದ ವಧುವಿನ ಮನೆಗೆ ಉಡುಗೆರೆ, ತಿಂಡಿ ತಿನಿಸು

ಗಳನ್ನು ಹೊತ್ತುಕೊಂಡು ಹೋದವರ ಸಂಖ್ಯೆಯನ್ನು ಲೆಖ್ಖಮಾಡಲು ಒಬ್ಬ ಗುಮಾಸ್ತನೇ ಬೇಕಾದೀತು. ಅವರಿಗೆಲ್ಲಾ ಮರ್ಯಾದೆಮಾಡಿ ಕಳುಹಿಸುವುದ ರಲ್ಲಿ ಹೆಣ್ಣಿನ ಕಡೆಯವರಿಗೂ ಬೇಕಾದಷ್ಟು ಖರ್ಚಾಗಿರಬೇಕು. ಈ ವಿಷಯ ವಾಗಿ ಅಮ್ಮನಿಗೂ ಮಾವನಿಗೂ ಚರ್ಚೆಯೂ ನಡೆದಿತ್ತು.

ಬ್ಯಾಂಡಿನವರು, ಓಲಗದವರು, ಪಿಳ್ಳಂಗೋವಿಯವರು ಮೊದಲಾಗಿ ಎಷ್ಟು ತರಹದ ಉಚ್ಚ ಶಬ್ದಗಳನ್ನು ಮಾಡುವ ವಾದ್ಯದವರು ಸಿಕ್ಕಬಹುದೋ ಅವರೆಲ್ಲರನ್ನೂ ಕರೆಸಿ ವಿಚಿತ್ರ ಕೋಲಾಹಲದಿಂದ ಮದಗಜ ಧ್ವನಿಗಳಂಥಾ ಸಂಗೀತ ಸ್ವರಗಳಿಂದ ಸರಸ್ವತಿಯ ಪದ್ಮವನವನ್ನೇ ಧ್ವಂಸಮಾಡುತ್ತಾ ಮೆರವಣಿಗೆ ಹೊರಟಂತಿತ್ತು. ಮದುವೆಯ ಮನೆಯನ್ನು ನಾನು ತಲಪಿದೆನು. ಉಂಗುರಗಳು, ಹಾರಗಳು, ಜರಿಪಂಚೆಗಳು ಜವಾಹರಿ ಒಡವೆಗಳು ಇವೆಲ್ಲವು ಗಳಿಂದ ನನ್ನ ಮೈ ಹರಾಜಿಗಿಟ್ಟಿರುವ ಒಡವೆಯ ಅಂಗಡಿಯಂತೆ ಇತ್ತು. ಹೆಣ್ಣಿನವರ ಭವಿಷ್ಯತ್ತಿನ ಅಳಿಯ ದೇವರ ಬೆಲೆಯೆಷ್ಟು ಎಂಬುದನ್ನು ಅಂಗಾಂಗಳಲ್ಲಿಯೂ ಸ್ಪಷ್ಟವಾಗಿ ತೋರಿಸಬೇಕೆಂಬುದೇ ಪ್ರಾಯಶಃ ನಮ್ಮವರ ಅಭಿಪ್ರಾಯವಾಗಿದ್ದಿರಬೇಕು.

ಮದುವೆಯ ಮನೆಯನ್ನು ಹೊಕ್ಕಾಗ ಮಾಮನಿಗೆ ತೃಪ್ತಿಯಾಗಲಿಲ್ಲ. ಒಂದನೆಯದು ಗಂಡಿನ ಕಡೆಯವರಿಗೆ ಅಲ್ಲಿ ಜಾಗ ಸಾಲುತ್ತಿರಲಿಲ್ಲ. ಎರಡನೆ ಯದಾಗಿ ಮಾಡಿದ್ದ ಏರ್ಪಾಡೆಲ್ಲಾ ಅತಿ ಸಾಮಾನ್ಯ. ಶಂಭುನಾಥಬಾಬುಗಳ ವ್ಯವಹಾರವೂ ಅಷ್ಟು ಚಟುವಟಿಕೆಯಿಂದಿರಲಿಲ್ಲ. ಅವರ ವಿನಯವೇನೂ ಅಂತಹ ಹೆಚ್ಚಿನದಲ್ಲ. ಬಾಯಿನಿಂದ ಮಾತೂ ಹೊರಡುತ್ತಿರಲಿಲ್ಲ. ಸೊಂಟಕ್ಕೆ ವಲ್ಲಿಯನ್ನು ಸುತ್ತಿಕೊಂಡು ಗಂಟೆಲೊಡೆದು, ಬಕ್ಕದಲೆಯ ಕರಿಯ ದಪ್ಪ ವ್ಯಕ್ತಿಯೊಬ್ಬರು ಹೆಣ್ಣಿನ ಕಡೆಯವರಾಗಿ ಓಡಾಡುತ್ತಿದ್ದರು. ಅವರು ವಕೀಲ ರಂತೆ. ಶಂಭುನಾಥಬಾಬುಗಳ ಸಹಪಾಠಿಗಳಾಗಿದ್ದರಂತೆ. ಅವರು ಅತಿ ನಮ್ರತೆಯಿಂದ—ಸ್ಮಿತ ಹಾಸ್ಯದೊಡನೆ ಗದ್ಗದ ವಚನದೊಡನೆ ತಾವು ಕಂಡ ಗಂಡಿನ ಕಡೆಯವರನ್ನು ಉಪಚರಿಸಿ ಸತ್ಕರಿಸದಿದ್ದರೆ ಆರಂಭದಲ್ಲೇ ಜಗಳವು ಆರಂಭವಾಗಿಬಿಡುತ್ತಿತ್ತು. ನಾನು ಹೋಗಿ ಹಸೆಯಮೇಲೆ ಕುಳಿತ ಒಂದು ಅರಘಳಿಗೆಯೊಳಗೆ ಮಾವನು ಶಂಭುನಾಥಬಾಬುಗಳನ್ನು ಹತ್ತಿರದ ಕೊಠಡಿಯೊಂದಕ್ಕೆ ಕರೆದುಕೊಂಡುಹೋದನು. ಮಾತುಕತೆ ಏನು ನಡೆಯಿತೋ

ನಾನರಿಯೆ—ಸ್ವಲ್ಪ ಹೊತ್ತಾದ ನಂತರ ಶಂಭುನಾಥಬಾಬುಗಳು ಬಂದು ನನ್ನನ್ನು ಕರೆದರು.

ಸಮಾಚಾರವಿಷ್ಟೆ—ಒಬ್ಬೊಬ್ಬ ಮನುಷ್ಯರಿಗೆ ಒಂದೊಂದು ವಿಧವಾದ ಹುಚ್ಚಿರುವುದು. ಮಾವನಿಗೆ ಒಂದು ಹುಚ್ಚಿತ್ತು. ಯಾರಿಂದಲೂ ಮೋಸ ಹೋಗಕೂಡದೆಂಬುದು ಅವನ ಹಟ....ಬೀಗರು ಹೆಣ್ಣಿಗೆ ಹಾಕುವ ಒಡವೆಯ ವಿಷಯದಲ್ಲಿ ಮೋಸ ಮಾಡುವರೆಂದು ಅವನ ಹೆದರಿಕೆ. ಹಾಗೆ ಒಂದುವೇಳೆ ಅವರು ಮೋಸಮಾಡಿದರೆ ಮದುವೆಯಾದನಂತರ ಅದನ್ನು ಸರಿಪಡಿಸುವುದು ಅಸಾಧ್ಯ. ಅದಕ್ಕಾಗಿ ಅವನು ಅಕ್ಕಸಾಲಿಗನನ್ನೂ ಕರೆದುಕೊಂಡು ಬಂದು ಕುಳಿತಿದ್ದನು. ಕೊಠಡಿಯೊಳಕ್ಕೆ ಹೋದಾಗ ಮಾವನು ಒಂದು ಕುರ್ಚಿಯ ಮೇಲೆ ಕುಳಿತಿದ್ದನು. ಹತ್ತಿರದಲ್ಲೇ ಅಕ್ಕಸಾಲೆಯು ತಕ್ಕಡಿ, ಬಟ್ಟುಗಳು ಒರೆಗಲ್ಲು ಎಲ್ಲವನ್ನು ಸಿದ್ಧವಾಗಿಟ್ಟುಕೊಂಡು ಕುಳಿತಿದ್ದನು.

ಶಂಭುನಾಥಬಾಬುಗಳು ನನ್ನೊಡನೆ ಹೀಗಂದರು. "ವಿವಾಹದ ಕೆಲಸವು ಪ್ರಾರಂಭವಾಗುವ ಮುಂಚೆ ಎಲ್ಲ ಒಡವೆಗಳನ್ನೂ ಅಕ್ಕಸಾಲೆಯ ಮೂಲಕ ಪರೀಕ್ಷೆ ಮಾಡಿಸಬೇಕೆಂದು ನಿಮ್ಮ ಮಾವನವರು ಹೇಳುತ್ತಿರುವರು. ಇದಕ್ಕೆ ನಿನ್ನ ಅಭಿಪ್ರಾಯವೇನು ?" ಎಂದರು.

ನಾನು ತಲೆತಗ್ಗಿಸಿಕೊಂಡು ಸುಮ್ಮನಿದ್ದೆನು. "ಅವನ ಅಭಿಪ್ರಾಯ ವೇನಿದೆ ? ನಾನು ಹೇಗೆ ಹೇಳಿದರೆ ಅವನು ಹಾಗೆ ಕೇಳುತ್ತಾನೆ—" ಎಂದು ಮಾವನು ಹೇಳಿದನು.

ಶಂಭುನಾಥಬಾಬುಗಳು ನನ್ನ ಕಡೆ ತಿರಿಗಿ—ಹಾಗಾದರೆ "ಸರಿ—ಅವರು ಏನು ಹೇಳಿದರೆ ನೀನು ಅದಕ್ಕೆ ಒಪ್ಪುವೆ. ಈ ವಿಷಯವಾಗಿ ನೀನೇನೂ ಹೇಳುವಂತಿಲ್ಲವಲ್ಲ—" ಹೀಗೆಂದರು.

ನಾನು ಸ್ವಲ್ಪವಾಗಿ ಮೈ ಅಲ್ಲಾಡಿಸುವುದರ ಮೂಲಕ ಈ ವಿಷಯದಲ್ಲಿ ನನ್ನ ಅಭಿಪ್ರಾಯಕ್ಕೆ ಅವಶ್ಯಕತೆಯೇ ಇಲ್ಲವೆಂದು ಸೂಚಿಸಿದೆನು.

"ಅವನೇಕೆ ಇಲ್ಲಿ, ಅವನು ಹೋಗಿ ಸಭೆಯಲ್ಲಿ ಕುಳಿತುಕೊಳ್ಳಲಿ" ಎಂದು ಮಾವನು ಹೇಳಿದನು. ಅದಕ್ಕೆ ಶಂಭುನಾಥಬಾಬುಗಳು—"ಸಭೆ ಯಲ್ಲೇಕೆ ? ಇಲ್ಲೇ ಕುಳಿತಿರಲಿ" ಎಂದರು.

ಸ್ವಲ್ಪ ಹೊತ್ತಾದನಂತರ ವಸ್ತ್ರವೊಂದರಲ್ಲಿ ಒಡವೆಗಳನ್ನು ಕಟ್ಟಿಕೊಂಡು ಬಂದು ಅಲ್ಲಿದ್ದ ಬೆಂಚಿನ ಮೇಲಿಟ್ಟರು—ಎಲ್ಲ ಅವರ ಅಜ್ಜನ ಕಾಲದ ಒಡವೆಗಳು. ಈ ಕಾಲದ ನಾಜೋಕು ಒಡವೆಗಳಲ್ಲ. ಎಲ್ಲ ಒಳ್ಳೆ ಭಾರವಾಗಿ ಮಜಭೂತಾದ ಒಡವೆಗಳು.

ಅಕ್ಕಸಾಲಿಗನು ಅವನ್ನು ಕೈಯಲ್ಲಿ ಎತ್ತಿನೋಡಿ ಹಾಗೆಯೇ ಕೆಳಗಿಟ್ಟು 'ಇವನ್ನೇನು ನೋಡುವುದು. ಇವುಗಳಲ್ಲಿ ಬೆಸಿಗೆಯಿಲ್ಲ, ಪುಡಿಯಿಲ್ಲ. ಈ ಕಾಲದಲ್ಲಿ ಇಂತಹ ಭಂಗಾರ ಸಿಕ್ಕುವುದೇ ಅಪೂರ್ವ '' ಎಂದನು............

ಮಾವನು ಒಂದು ನೋಟುಬುಕ್ಕನ್ನು ತೆಗೆದು ಒಡವೆಗಳ ಪಟ್ಟಿಯನ್ನು ಗುರ್ತು ಹಚ್ಚಿಕೊಂಡನು. ಆಮೇಲೆ ಅವುಗಳಲ್ಲಿ ಯಾವುದಾದರೂ ಮೋಸವಾಗದಂತಿರಲೆಂದು ಅವನ ಅಭಿಪ್ರಾಯ. ಲೆಖ್ಖಹಾಕಿ ನೋಡಿದಾಗ ಮುಂಚೆ ಕೊಡುವುದಾಗಿ ಒಪ್ಪಂದವಾಗಿದ್ದುದಕ್ಕಿಂತ ಹೆಚ್ಚು ಬೆಲೆಯ ಒಡವೆಗಳು ಇದ್ದುವು.

ಒಡವೆಗಳಲ್ಲಿ ಒಂದು ಜೊತೆ ಬೆಂಡೋಲೆಗಳಿದ್ದುವು. ಶಂಭುನಾಥ ಬಾಬುಗಳು ಅವನ್ನು ತೆಗೆದು ಅಕ್ಕಸಾಲಿಗನ ಕೈಲಿ ಕೊಟ್ಟರು. ಇದು ಈ ಕಾಲದ ತಯಾರಿ—ಸೀಮೆ ಕಲ್ಲುಗಳು. ಇವುಗಳಲ್ಲಿ ಚಿನ್ನವೂ ಕಡಿಮೆ ಎಂದು ಅವನು ಹೇಳಿದನು.

ಶಂಭುನಾಥಬಾಬುಗಳು ಅದನ್ನು ಮಾವನ ಹತ್ತಿರ ಕೊಟ್ಟು—ಇದು ನಿಮ್ಮ ಹತ್ತಿರವೇ ಇರಲಿ ಎಂದರು.

ಮಾವನು ಅದನ್ನೆತ್ತಿಕೊಂಡು ನೋಡಿದಾಗ—ಹೆಣ್ಣನ್ನು ನೋಡ ಹೋಗಿದ್ದಾಗ ನಮ್ಮವರೇ ಕೊಟ್ಟದ್ದೆಂದು—ಗೊತ್ತಾಯಿತು. ಮಾವನ ಮುಖವು ಕೆಂಪಗಾಯಿತು. ಅವರು ತನ್ನನ್ನು ಮೋಸಮಾಡಲೆತ್ನಿಸುವರು. ತಾನು ಮೋಸ ಹೋಗೆನು, ಎಂದು ಆನಂದಿಸಲು ಆಶಿಸುತ್ತಿದ್ದನು. ಆದರೆ ಅಂತಹ ಆನಂದದಿಂದ ವಂಚಿತನಾದನು. ಅಷ್ಟೇ ಅಲ್ಲ ಅವನ ಮೇಲೆಯೇ ನಾಚಿಕೆಯ ಹೊರೆ ಹೊರಿಸಿದರು. ಮುಖವನ್ನು ಭಾರವಾಗಿ ಮಾಡಿಕೊಂಡು ನನ್ನ ಕಡೆಗೆ ತಿರುಗಿ 'ಅನುಪಮ್ ' ಹೋಗು. ನೀನಿನ್ನು ಸಭೆಯಲ್ಲಿ ಹೋಗಿ ಕುಳಿತುಕೋ. ' ಎಂದನು.

ಶಂಭುನಾಥಬಾಬುಗಳು–' ಬೇಡ, ಈಗೇನೂ ಸಭೆಯಲ್ಲಿ ಕುಳಿತು ಕೊಳ್ಳಬೇಕಾದ ಅವಶ್ಯಕತೆಯಿಲ್ಲ. ನಡಿಯಿರಿ. ಮೊದಲು ನಿಮಗೆಲ್ಲ ಭೋಜನ ವಾಗಲಿ. ಎಂದರು. '

ಅದು ಹೇಗೆ ? ಲಗ್ನ—? ಎಂದು ಮಾವನು ಕೇಳತೊಡಗಿದನು. ' ಅದರ ವಿಷಯ ಯೋಚಿಸಬೇಡಿರಿ. ಮುಂಚೆ ಊಟಕ್ಕೆ ಏಳಿ ' ಎಂದರು.

ಮನುಷ್ಯನು ಸಂಪೂರ್ಣ ಸಾಧುವಂತೆ ಕಂಡರೂ ಒಳಗೊಳಗೇ ಬಲವಿ ರುವರೆಂದು ಎಲ್ಲರಿಗೂ ಸ್ಪಷ್ಟವಾಗುತ್ತಿತ್ತು. ಮಾವನು ಏಳಲೇಬೇಕಾಯಿತು. ಗಂಡಿನ ಕಡೆಯವರಿಗೆಲ್ಲಾ ಊಟವಾಯಿತು. ಆಡಂಬರದ ಏರ್ಪಾಡೇನೂ ಇರಲಿಲ್ಲ. ಆದರೆ ಅಡಿಗೆ ಬಹು ಚೆನ್ನಾಗಿತ್ತು. ಬಡಿಸುವುದರಲ್ಲೂ ಬಹು ಒಪ್ಪವೂ ಲಕ್ಷಣವೂ ಇತ್ತು.

ಗಂಡಿನ ಕಡೆಯವರೆಲ್ಲಾ ಊಟ ಮಾಡಿದ ನಂತರ ಶಂಭುನಾಥ ಬಾಬು ಗಳು ನನ್ನ ಕಡೆ ತಿರುಗಿ ಊಟ ಮಾಡ ಹೇಳಿದರು. ಅದಕ್ಕೆ ' ಅದು ಹೇಗೆ ಸಾಧ್ಯ '? ವಿವಾಹಕ್ಕೆ ಮುಂಚೆ ವರನಿಗೆಲ್ಲಿಯ ಊಟ ? ಎಂದನು. ಈ ವಿಷಯದಲ್ಲಿ ಮಾವನ ಮಾತಿಗೆ ಲಕ್ಷ್ಯವನ್ನೇ ಕೊಡದೆ ಶಂಭುನಾಥ ಬಾಬು ಗಳು ನನ್ನ ಕಡೆಗೆ ತಿರುಗಿ–' ಏನು, ಊಟ ಮಾಡಲು ಏನಾದರೂ ಆಕ್ಷೇಪಣೆ ಯಿದೆಯೋ, ? ಅಂದರು.

ಮಾತೃ ಆಜ್ಞೆಯ ಪ್ರತ್ಯಕ್ಷ ಮೂರ್ತಿಯಂತೆ ಮಾವನು ಇದಿರಿನಲ್ಲಿ ನಿಂತಿ ರುವಾಗ ನಾನೇನು ಬಾಯಿಬಿಡಬಲ್ಲನೇ. ನಾನು ಊಟಕ್ಕೆ ಕುಳಿತುಕೊಳ್ಳ ಲಿಲ್ಲ.

ಆಗ ಶಂಭುನಾಥ ಬಾಬುಗಳು ಮಾವನ ಕಡೆಗೆ ತಿರಿಗಿ–' ನಿಮಗೆಲ್ಲಾ ಬಹು ಶ್ರಮ ಕೊಟ್ಟೆನು. ನಿಮ್ಮಗಳ ಅಂತಸ್ತಿಗೆ ತಕ್ಕಂತೆ ಏರ್ಪಾಡು ಮಾಡ ಲಾರದವನು ನಾನು. ಕ್ಷಮಿಸಿರಿ. ರಾತ್ರಿ ಬಹು ಹೊತ್ತಾಯಿತು. ಇನ್ನು ನಿಮ ಗೆಲ್ಲಾ ಹೆಚ್ಚು ಕಷ್ಟ ಕೊಡಲು ಇಷ್ಟವಿಲ್ಲ. ದಯವಿಟ್ಟು—

' ನಾವೆಲ್ಲ ಸಿದ್ಧರಾಗಿರುವೆವು. ಸಭೆಗೆ ನಡೆಯಿರಿ ' ಎಂದು ಮಾವನು ಹೇಳಿದನು.

' ಹಾಗಾದರೆ ನಿಮ್ಮ ಗಾಡಿಗಳನ್ನು ಕರೆಸಲೇ ' ಎಂದು ಶಂಭುನಾಥರು

ಕೇಳಿದರು. ಮಾವನು ಆಶ್ಚರ್ಯದಿಂದ 'ಏನು ಹಾಸ್ಯ ಮಾಡುತ್ತೀರೇನು' ಎಂದನು.

"ನೀವೇ ಹಾಸ್ಯವನ್ನು ಆರಂಭ ಮಾಡಿದವರು. ಅದರ ಸಂಪರ್ಕವನ್ನು ಸ್ಥಿರಪಡಿಸಲು ನನಗೆ ಇಷ್ಟವಿಲ್ಲ." ಎಂದು ಶಂಭುನಾಥರು ಹೇಳಿದರು.

ಮಾವನು ಎರಡು ಕಣ್ಣುಗಳನ್ನೂ ದೊಡ್ಡದಾಗಿ ಮಾಡಿಕೊಂಡು ನೋಡುತ್ತ ನಿಂತಿದ್ದನು—"ನನ್ನ ಮಗಳ ಒಡವೆಯನ್ನು ನಾನು ಕದಿಯುವೆನೆಂದು ಭಾವಿಸುವವರ ಮನೆಗೆ ನನ್ನ ಮಗಳನ್ನು ಖಂಡಿತ ಕೊಡೆನು" ಎಂದು ಶಂಭುನಾಥಬಾಬುಗಳು ಹೇಳಿದರು. ನನ್ನೊಡನೆ ಒಂದು ಮಾತನ್ನಾದರೂ ಆಡುವ ಆವಶ್ಯಕತೆಯಿದೆಯೆಂದು ಅವರೆಣಿಸಲಿಲ್ಲ. ಏಕೆಂದರೆ ನಾನು ಯಾವ ಲೆಖ್ಖಕ್ಕೂ ಸೇರಿದವನಲ್ಲವೆಂದು ಅವರಿಗೆ ಪ್ರಮಾಣವಾಗಿಬಿಟ್ಟಿತ್ತು.

ಆ ಮೇಲೆ ನಡೆದ ಮಾತುಕಥೆಗಳನ್ನು ಹೇಳಲು ನನಗೆ ಇಷ್ಟವಿಲ್ಲ. ಬಿರುಗಾಳಿ ಲಾರ್ಟೀ ಬೆಳಕಲ್ಲಿ ಸಾಮಾನುಗಳನ್ನು ಉರುಳಿಸುತ್ತಾ, ಕೆಡವುತ್ತಾ, ಸಿಕ್ಕಾಪಟ್ಟೆ ಕಟ್ಟಿಕೊಂಡು ಗಂಡಿನವರ ಗುಂಪು ದಕ್ಷಯಜ್ಞಕ್ಕೆ ಬಂದಿದ್ದ ದೇವ ಗಣಗಳಂತೆ ನಡೆದರು.

ಮನೆಗೆ ಹಿಂತಿರುಗುವಾಗ ಓಲಗ, ಬ್ಯಾಂಡು ಏನೂ ಇರಲಿಲ್ಲ. ಆಕಾಶದ ನಕ್ಷತ್ರಗಳನ್ನೆಲ್ಲಾ ಮೋಡಗಳು ಮುಚ್ಚಿಬಿಟ್ಟಿದ್ದವು.

೩

ಮನೆಯವರೆಲ್ಲ ಕೋಪಗೊಂಡು ಕಿಡಿಕಿಡಿಯಾಗಿದ್ದರು. ಹೆಣ್ಣಿನ ತಂದೆಗೆ ಇಷ್ಟು ಗರ್ವವೇ. "ಕಲಿಕಾಲ. ಪೂರ್ಣ ಕಲಿಕಾಲ! ಇರಲಿ. ಆ ಹೆಣ್ಣಿಗೆ ಹೇಗೆ ತಾನೆ ಮದುವೆ ಮಾಡುವನು ನೋಡೋಣ," ಎಂದು ಎಲ್ಲರೂ ಹೇಳುತ್ತಿದ್ದರು. ಆದರೆ ಮಗಳ ಮದುವೆಯು ಆಗುವುದಿಲ್ಲವೆಂಬ ಹೆದರಿಕೆಯೇ ಇಲ್ಲದವರಿಗೆ ಏನು ತಾನೆ ಶಾಸ್ತಿ ಮಾಡಲಾದೀತು?

ಇಡೀ ಬಂಗಾಲದಲ್ಲಿ ಮದುವೆಯ ಚಪ್ಪರದಿಂದ ಸ್ವತಃ ಹೆಣ್ಣಿನ ತಂದೆಯಿಂದಲೇ ಹೊರಕ್ಕೆ ಕಳುಹಿಸಲ್ಪಟ್ಟ ಗಂಡು ನಾನೊಬ್ಬನೇ - ಇಂತಹ ಸತ್ಪಾತ್ರನ ತಲೆಯ ಮೇಲೆ ಇಂತಹ ಕಲಂಕದ ಹೊರೆಯನ್ನು ಹೊರಿಸಬೇಕೇ

ಎಂದು ಬಂದಿದ್ದ ನೆಂಟರು ಹಣೆ ಚಚ್ಚಿಕೊಂಡರು. ಮದುವೆಯಾಗಲಿಲ್ಲ. 'ನಮ್ಮನ್ನೆಲ್ಲಾ ಮೋಸ ಮಾಡಿ ಊಟಕ್ಕೆ ಕೂರಿಸಿದರು. ತಿಂದ ತಿಂಡಿಯ ನ್ನೆಲ್ಲಾ ಹೊಟ್ಟೆಯಿಂದ ತೆಗೆದು ಅಲ್ಲಿಯೇ ಬಿಸಾಟು ಬಂದಿದ್ದರೆ ಚನ್ನಾಗಿರು ತ್ತಿತ್ತು' ಎಂದರು. ಮದುವೆಯ ಮಾತು ತಪ್ಪಿದ್ದಕ್ಕೂ ಮಾನಭಂಗ ಮಾಡಿ ದ್ದಕ್ಕೂ ವ್ಯಾಜ್ಯ ಹೂಡುವುದಾಗಿ ಮಾವನು ಹೇಳಿದನು. ಹಾಗೆ ಮಾಡಿದರೆ ಮುಯ್ಯಿಗೆ ಮುಯ್ಯಿ ಕೊಟ್ಟಂತಾಗುವುದೆಂದು ಹಿತೈಷಿಗಳು ಸಮಾಧಾನ ಹೇಳಿದರು.

ನನಗೂ ಬಹು ಕೋಪ ಬಂದಿತ್ತೆಂದು ಸಂಗತಿ ಹೇಳಬೇಕಾದ್ದಿಲ್ಲ. ಯಾವ ರೀತಿಯಲ್ಲಾದರೂ ಶಂಭುನಾಥಬಾಬುಗಳು ನನ್ನ ಕಾಲಿಗೆ ಬಿದ್ದು ಬೇಡಿಕೊಂಡು ಮದುವೆ ಮಾಡಿಯೇ ಮಾಡುವರು ಎಂದುಕೊಂಡು ಆಗತಾನೆ ಕಾಣತೊಡಗಿದ್ದ ಮೀಸೆಯ ರೇಖೆಯ ಮೇಲೆ ಕೈಯಾಡಿಸುತ್ತ ಮನಸ್ಸಿನ ಮಂಡಿಗೆ ಎಣಿಸುತ್ತಿದ್ದೆನು.

ಆದರೆ ಈ ಕೋಪದ ಪ್ರವಾಹದ ಸಂಗಡಲೇ ಇನ್ನೊಂದು ಪ್ರವಾಹವೂ ಇತ್ತು. ನನ್ನ ಮನಸ್ಸೆಲ್ಲಾ ಆ ಅಪರಿಚಿತೆಯನ್ನು ಹೊಂದಲು ಹಾತೊರೆಯು ತ್ತಿತ್ತು. ಈಗಲೂ ಆ ಆಶೆಯನ್ನು ಹಿಂತಿರಿಗಿಸಲು ಸಾಧ್ಯವಿಲ್ಲ. ಅವಳ ಹಣೆ ಯಲ್ಲಿದ್ದ ಚಂದನ ರೇಖೆ, ಮೈಮೇಲಿನ ಹಳದಿ ಶೀರೆ, ಮುಖದಲ್ಲಿ ಲಜ್ಜೆಯ ನಸುಗೆಂಪು ಇವೆಲ್ಲವೂ ನೆನಪಾಗಿ ನನ್ನ ಹೃದಯದಲ್ಲಿ ಉಂಟಾಗುತ್ತಿದ್ದ ವಿಚಿತ್ರ ಅನುರಾಗ ಭಾವಗಳನ್ನು ವರ್ಣಿಸುವುದು ಹೇಗೆ ಸಾಧ್ಯ! ನನ್ನ ಕಲ್ಪನಾ ಲೋಕದ ಕಲ್ಪಲತೆಯು ವಸಂತದ ಸಮಸ್ತ ಹೂಗಳ ಭಾರವನ್ನು ನನಗೆ ನಿವೇದನ ಮಾಡಿಬಿಡುವ ಆಶೆಯಲ್ಲಿ ತಲೆಬಾಗಿ ನಿಂತಿದೆ. ಗಾಳಿ ಬೀಸುವುದು, ಪರಿಮಳ ಬೀರುವುದು, ಎಲೆಗಳ ಶಬ್ದ ಕೇಳುವುದು. ಆದರೆ, ಆ ವಧುವಿನ ಪೆಜ್ಜೆಯ ಸಪ್ಪಳವೊಂದು ಕೇಳಿಸದು. ಈ ಸಮಯದಲ್ಲಿ ಬಹು ದೂರ ದಿಗಂ ತದಲ್ಲಿ ನನ್ನ ವಧೂ ಪದಧ್ವನಿಯು ಕೇಳಿಸುವಂತೆ ಅನುಭವವು ಆಗುತ್ತಿತ್ತು.

ಇಷ್ಟು ದಿನ ಪ್ರತಿದಿನ ಸಂಜೆ ಬಿನೂದಾದನ ಮನೆಗೆ ಹೋಗಿ ಹುಡು ಗಿಯ ವಿಷಯವಾಗಿ ಅವನ ಸಂಗಡ ಮಾತನಾಡಿ ಅವನಿಗೆ ಬೇಜಾರುಪಡಿಸಿ ದ್ದೆನು. ಅವನು ಮಾತಿನಲ್ಲಿ ಬಹು ಜಿಪುಣನು. ಆದ್ದರಿಂದಲೇಯೋ ಏನೋ ಅವನ ಮಾತುಗಳು ನನ್ನ ಮನಸ್ಸಿನಲ್ಲಿ ಬಾಲಚುಕ್ಕಿಗಳಂತೆ ಉರಿಯು

ತ್ತಿದ್ದವು. ಹುಡುಗಿಯು ಅತಿ ರೂಪವತಿಯೆಂದು ಅರಿತಿದ್ದೆನು. ಆದರೆ ಅವ ಳನ್ನು ನೋಡಲಿಲ್ಲ. ಅವಳ ಚಿತ್ರವನ್ನೂ ಕಾಣಲಿಲ್ಲ. ಎಲ್ಲವೂ ಅಸ್ಪಷ್ಟ ವಾಗಿತ್ತು. ಹೊರಗಂತೂ ಅವಳನ್ನು ಕಾಣಲಿಲ್ಲ. ಆದರೆ ಮನಸ್ಸಿನಲ್ಲೂ ಅವಳ ರೂಪವನ್ನು ನೆಲೆಗೊಳಿಸುವುದು ಸಾಧ್ಯವಾಗಲಿಲ್ಲ. ಈ ಕಾರಣ ದಿಂದಲೇ ನನ್ನ ಮನಸ್ಸು ಅಂದಿನ ವಿವಾಹ ಸಭೆಯ ತೆರೆಯ ಮರೆಯಲ್ಲೇ ಭೂತದಂತೆ ಸಂಚರಿಸತೊಡಗಿತು.

ಹುಡುಗಿಯು ನನ್ನ ಫೋಟೋ ನೋಡಿದ್ದಳೆಂದು ಹರೀಶನು ಹೇಳಿದ್ದನು. ಅವಳು ಒಪ್ಪಿಯೂ ಇದ್ದಳೆಂದು ಅರಿತಿದ್ದೆ. ಒಪ್ಪದಿರಲು ಕಾರಣವೇನೂ ಇರ ಲಿಲ್ಲ. ನನ್ನ ಫೋಟೋವು ಅವಳ ಪೆಟ್ಟಿಗೆಗಳೊಂದರಲ್ಲಿ ಅಡಗಿದೆಯೆಂದು ನನಗೆ ಅನಿಸಿತು. ಅವಳು ತನ್ನ ಕೊಠಡಿಯಲ್ಲಿ ಒಂಟಿಯಾಗಿ ಕುಳಿತು ಮಧ್ಯಾಹ್ನದ ವೇಳೆಯಲ್ಲಿ ಅದನ್ನು ಹೊರಕ್ಕೆ ತೆಗೆದು ನೋಡುವುದಿಲ್ಲವೇ? ಅವಳು ಅದನ್ನು ಏಕಾಗ್ರದೃಷ್ಟಿಯಿಂದ ನೋಡುವಾಗ ಅವಳ ಮುಖದ ಎರಡು ಭಾಗಗಳಿಂದ ಅವಳ ತಲೆಯ ಕೂದಲು ಜಾರಿ ಆ ಚಿತ್ರದ ಮೇಲೆ ಬೀಳದೇ ? ಆಕಸ್ಮಾತ್ತಾಗಿ ಕೊಠಡಿಯ ಹೊರಗೆ ಯಾರಾದರೂ ನಡೆಯುವ ಶಬ್ದವನ್ನು ಕೇಳಿ ಅವಳು ಆ ಚಿತ್ರವನ್ನು ಮುಚ್ಚಿಡಲು ಯತ್ನಿಸಿ ಅವಸರದಿಂದ ತನ್ನ ಸುಗಂಧವಾದ ಸೆರಗಿನಲ್ಲಿ ಬಚ್ಚಿಡಳೇ." ಎಂದು ಹೀಗೆ ಹಲವಾರು ಕನಸುಗಳು ನನ್ನ ಮನಸ್ಸಿನಲ್ಲಿ ತಲೆ ಹಾಕುತ್ತಿದ್ದುವು.

ದಿನಗಳು ಕಳೆದವು. ಒಂದು ವರ್ಷ ಕಳೆಯಿತು. ಮಾವನಂತೂ ನಾಚಿಕೆ ಯಿಂದ ಮದುವೆಯ ಸುದ್ದಿಯನ್ನೇ ಎತ್ತಲಾರದಿದ್ದನು. ನಮ್ಮ ಅವಮಾನದ ಸುದ್ದಿಯನ್ನು ಜನರು ಸ್ವಲ್ಪ ಮರೆತನಂತರ ಮತ್ತೆ ಮದುವೆಗೆ ಯತ್ನಿಸಬೇ ಕೆಂದು ಅಮ್ಮನು ನಿಶ್ಚಯಿಸಿದ್ದಳು.

ಅತ್ತ ಆ ಹುಡುಗಿಯು ಇನ್ನೊಂದು ಉತ್ತಮ ವರನನ್ನು ಗೊತ್ತುಮಾಡಿ ದ್ದರೂ ಮದಿವೆಯನ್ನೇ ಮಾಡಿಕೊಳ್ಳನೆಂದು ಹಟಹಿಡಿದಿರುವುದಾಗಿ ಕೇಳಿದೆನು ಈ ವಿಷಯವನ್ನು ಕೇಳಿ ನನಗೆ ಬಹು ಆನಂದವಾಯಿತು. ನನ್ನ ಮನಸ್ಸಿನಲ್ಲಿ ಹಲವು ಕಲ್ಪನೆಗಳು ತೋರತೊಡಗಿದವು. ಆ ಹುಡುಗಿಯು ಹೊಟ್ಟೆತುಂಬ ಊಟಮಾಡಳು. ಸಂಜೆಯಾಗಿದ್ದರೂ ಅವಳು ತಲೆ ಬಾಚಿ ಹೆಣೆದುಕೊಳ್ಳ

ವುದನ್ನೇ ಮರೆತಿರುವಳು. ಅವಳ ತಂದೆಯು ಮಗಳ ಮುಖದ ಕಡೆ ನೋಡಿ ನನ್ನ ಮಗಳು ದಿನೇ ದಿನೇ ಹೀಗೇಕೆ ಬಡವಾಗುತ್ತಿರುವಳು ಎಂದು ಯೋಚಿಸುತ್ತಿರುವನು. ಒಂದು ದಿನ ಆತನು ಅಕಸ್ಮಾತ್ತಾಗಿ ಮಗಳ ಕೊಠಡಿಗೆ ಹೋದಾಗ ಅವಳು ಕಣ್ಣೀರು ಸುರಿಸುತ್ತಿದ್ದುದನ್ನು ಕಾಣುವನು. 'ಮಗೂ, ನಿನಗೇನಾಗಿದೆ ಹೇಳಮ್ಮ' ಎಂದು ವಿಚಾರಿಸುವನು. ಹುಡುಗಿಯು ಅವಸರದಿಂದ ಕಣ್ಣೊರಸಿಕೊಳ್ಳುತ್ತ 'ಏನೂ ಇಲ್ಲ ಅಪ್ಪ', ಎಂದು ಹೇಳುವಳು. ತಂದೆಗೆ ಒಬ್ಬಳೇ ಮಗಳು. ಅವಳೆಂದರೆ ಆತನಿಗೆ ಪ್ರಾಣ. ಅನಾವೃಷ್ಟಿಯ ದಿನದ ಹೂಗಿಡದಂತೆ ಅವಳು ದಿನದಿನಕ್ಕೆ ಒಣಗತೊಡಗಿದರೆ ಅವನ ಮನಸ್ಸು ಹೇಗೆ ತಾನೆ ಸಹಿಸೀತು. ಆಗ ಅವನು ಅಭಿಮಾನವನ್ನು ದೂರಮಾಡಿ ಹೊರಟು ನೆಟ್ಟಗೆ ನಮ್ಮ ಮನೆಯ ಬಾಗಿಲಿಗೆ ಬರುವನು. ಆಮೇಲೋ? ಅನಂತರ ಮನಸ್ಸಿನಲ್ಲೇ ಹರಿಯುತ್ತಿದ್ದ ಕಾಳವರ್ಣದ ಆ ಇನ್ನೊಂದು ಹುಚ್ಚು ಹೊಳೆಯು ಹರಿಯತೊಡಗಿತು. ಅದು ಕಾಳಸರ್ಪದಂತೆ ಭುಸಗುಟ್ಟುತ್ತಾ ಹೇಳತೊಡಗಿತು. 'ಸರಿ, ಸೊಗಸಾಯಿತು ಬಿಡು, ಮತ್ತೊಮ್ಮೆ ವಿವಾಹದ ಏರ್ಪಾಡು. ದೀಪಗಳ ಸಂಭ್ರಮ. ದೇಶ ದೇಶಾಂತರದ ನೆಂಟರಿಷ್ಟರಿಗೆ ಕರೆ. ಆ ಮೇಲೆ ನೀನು ಮದುವೆಯ ಗಂಡಿನ ವೇಷಹಾಕಿಕೊಂಡು ಹೋಗಿ ಭಾಷಿಂಗವನ್ನು ಕಿತ್ತುಹಾಕಿ ನಿಮ್ಮ ಗುಂಪಿನವರೆಲ್ಲರೊಡನೆ ಮನೆಗೆ ಹೊರಟು ಬಾ' ಎಂದಿತು. ಆದರೆ ಮನಸ್ಸಿನಲ್ಲಿ ಪ್ರವಹಿಸುತ್ತಿದ್ದ ಕಣ್ಣೀರಿನಂತೆ ಇದ್ದ ಶುಭ್ರ ಧಾರೆಯಾದರೋ ರಾಜಹಂಸದ ರೂಪವನ್ನು ಧರಿಸಿ ಹೇಳತೊಡಗಿತು. ಹೇಗಾದರೂ ಮಾಡಿ ನಾನು ಹಿಂದೆ ದಮಯಂತಿಯ ಪುಷ್ಪವನಕ್ಕೆ ಹೋಗಿದ್ದೆನಲ್ಲಾ ಹಾಗೆಯೇ ನನಗೊಮ್ಮೆ ಹಾರಿಹೋಗಲು ಅವಕಾಶ ಕೊಡು. ನಾನು ಹೋಗಿ ವಿರಹಿಣಿಯ ಕಿವಿಯಲ್ಲಿ ಒಮ್ಮೆ ನಿನ್ನ ಸಂಕಟದ ಸುದ್ದಿಯನ್ನು ಹೇಳಿ ಬರುವೆನು—ಆ ಮೇಲೆ? ಅನಂತರ ದುಃಖದ ರಾತ್ರಿಯು ಕಳೆಯಿತು. ಹೊಸ ಮಳೆಯ ನೀರು ಸುರಿಯಿತು. ಬಾಡಿಹೋದ ಹೂವು ತಲೆಯೆತ್ತಿತು. ಈ ಬಾರಿಗೆ ಪೃಥ್ವಿಯ ಸಕಲ ಜನವೂ ಹೊರಗೇ ನಿಂತರು. ಅನಂತರ ಒಳಗೆ ಒಬ್ಬನೇ ಮನುಷ್ಯ ಒಳಹೊಕ್ಕನು. ಅನಂತರ? ಅನಂತರ ನನ್ನ ಕಥೆ ಮುಗಿಯಿತು.

೪

ಆದರೆ ಕಥೆಯು ಅಷ್ಟಕ್ಕೇ ಮುಗಿಯಲಿಲ್ಲ. ಅದು ಎಲ್ಲಿಗೆ ಬಂದು ಮುಗಿಯದೆ ಉಳಿಯಿತೋ ಅಲ್ಲಿಯ ವಿವರವನ್ನು ತಿಳಿಸಿ ನನ್ನ ಈ ಬರಹವನ್ನು ಕೊನೆಗಾಣಿಸುವೆನು.

ಅಮ್ಮನನ್ನು ಕರೆದುಕೊಂಡು ತೀರ್ಥಯಾತ್ರೆಗೆ ಹೊರಟೆನು. ಜವಾಬ್ದಾರಿಯು ನನ್ನಮೇಲೆಯೇ ಬಿದ್ದಿತು. ಏಕೆಂದರೆ ಮಾವನು ಈ ಸಲವೂ ಹೌರಾ ಸೇತುವೆಯನ್ನು ದಾಟಲಿಲ್ಲ. ರೈಲಿನಲ್ಲಿ ಮಲಗಿದ್ದೆನು. ಕುಲುಕಾಟ, ಅಲುಗಾಟದಿಂದ ನಿದ್ರೆಯ ಜೊಂಪು ಹತ್ತಿತ್ತು. ಹಾಗೆಯೇ ಹಲವು ತರಹದ ಸ್ವಪ್ನವು ತಲೆಯಲ್ಲಿ ಓಡಾಡುತ್ತಿತ್ತು. ಅಕಸ್ಮಾತ್ತಾಗಿ ಯಾವದೋ ಸ್ಟೇಷನ್ನಿನಲ್ಲಿ ಎಚ್ಚರವಾಯಿತು. ಬೆಳಕಿನೊಡನೆ ಕತ್ತಲು ಬೆರೆತಂತೆ ಅದೂ ಒಂದು ಸ್ವಪ್ನವೇ. ಕೇವಲ ಆಕಾಶದ ನಕ್ಷತ್ರಗಳು ಮಾತ್ರ ಚಿರಪರಿಚಿತ. ಮತ್ತೆಲ್ಲವೂ ಅಪರಿಚಿತ. ಸ್ಟೇಷನ್ನಿನ ದೀಪಗಳು ಮಾತ್ರ ಈ ಪೃಥ್ವಿಯು ಎಷ್ಟು ಅಪರಿಚಿತ ಮತ್ತು ನಾಲ್ಕು ದಿಕ್ಕುಗಳಲ್ಲಿಯೂ ತಾವು ಎಷ್ಟುದೂರ ಬೆಳಕು ಮಾಡಿ ತೋರಿಸುವೆವು ನೋಡಿ ಎನ್ನುವಂತಿದ್ದುವು. ಗಾಡಿಯ ಮಧ್ಯದಲ್ಲಿ ಅಮ್ಮನು ನಿದ್ರೆಹೋಗುತ್ತಿದ್ದಳು. ಗಾಡಿಯ ದೀಪವನ್ನು ಹಸರು ಪರದೆಯಿಂದ ಮುಚ್ಚಿತ್ತು. ಟ್ರಂಕು ಪೆಟ್ಟಿಗೆಗಳು, ಗಂಟುಮೂಟೆಗಳು ಎಲ್ಲಾ ಅಸ್ತವ್ಯಸ್ತವಾಗಿ ಒಂದರ ಮೇಲೊಂದು ಬಿದ್ದಿದ್ದುವು. ಅವುಗಳೆಲ್ಲ ಸ್ವಪ್ನಲೋಕದ ಅಸ್ತವ್ಯಸ್ತ ವಸ್ತುಗಳಂತೆ, ಪ್ರದೋಷದ ಮಬ್ಬಿನ ಬೆಳಕಿನಲ್ಲಿದ್ದಂತೆ ಆ ಹಸರು ಬೆಳಕಿನಲ್ಲಿ ಕಂಡೂ ಕಾಣದಾಗಿ ಮಂಕು ಮಂಕಾಗಿ ಕಾಣಿಸುತ್ತಿದ್ದವು.

ಇಂತಹ ಸಮಯದಲ್ಲಿ ಆ ಅಪ್ರಾಕೃತ ಪೃಥ್ವಿಯ ಅದ್ಭುತ ರಾತ್ರಿಯಲ್ಲಿ ಯಾರದೋ ಧ್ವನಿಯು ಕೇಳಿಸಿತು. "ಶೀಗ್ಗಿರ್ ಚಲೇ ಆಯ್ - ಎಯಿ ಗಾಡೀತೇ ಜಾಯಗಾ ಆಛೇ" (ಶೀಘ್ರವಾಗಿ ಬನ್ನಿ. ಈ ಗಾಡಿಯಲ್ಲಿ ಜಾಗವಿದೆ.)

ಮನಸ್ಸಿಗೆ ಸಂಗೀತವನ್ನು ಕೇಳಿದಂತಾಯಿತು. ಬಂಗಾಲೀ ಸ್ತ್ರೀಯ ಕಂಠದ ಬಂಗಾಲೀ ಮಾತುಗಳು ಎಷ್ಟು ಮಧುರವೆಂಬುದನ್ನರಿಯಬೇಕಾದರೆ ಇಂಥ ಅವೇಳೆಯಲ್ಲಿ ಅಸ್ಥಾನದಲ್ಲಿ ಅಕಸ್ಮಾತ್ತಾಗಿ ಕೇಳಿದಾಗ ತಾನೇ ಅದು

ಗೊತ್ತಾಗುವುದು. ಆದರೆ ಈ ಕಂಠವನ್ನು ಕೇವಲ ಸ್ತ್ರೀಕಂಠವೆಂದು ಹೇಳಿ ಒಂದು ಸಾಲಿನಲ್ಲಿ ಬಿಡಲಾಗುವುದಿಲ್ಲ. ಇದೊಂದು ಅಪೂರ್ವ ಮಾನವ ಕಂಠದ ಧ್ವನಿ. ಕೇಳಿದೊಡನೆ ಹೀಗೆ ಹಿಂದೆಂದೂ ಕೇಳಿಲ್ಲವೆಂದು ಮನಸ್ಸಿಗೆ ಅನಿಸುವುದು. ನನಗಂತೂ ಕಂಠಧ್ವನಿ ಬಹುಕಾಲ ನೆನಪಿರುವುದು. ಅನಿರ್ವಚನೀಯವಾದ ಅಂತರಂಗದ ವ್ಯಕ್ತಿಯನ್ನು ಕಂಠಸ್ವರದಿಂದಲೇ ರೂಪಿಸಿ ಕೊಂಡೆನು. ಅವಸರವಾಗಿ ಎದ್ದು ಗಾಡಿಯ ಕಿಟಕಿಯನ್ನು ತೆರೆದು ಹೊರಗೆ ತಲೆಹಾಕಿ ನೋಡಿದೆನು. ಏನೂ ಕಾಣಿಸಲಿಲ್ಲ. ಪ್ಲಾಟಫಾರಮ್ಮಿನ ಕತ್ತಲೆ ಯಲ್ಲಿ ನಿಂತು ಗಾರ್ಡನು ತನ್ನ ಒಕ್ಕಣ್ಣಿನ ಲಾಂದ್ರವನ್ನು ಆಡಿಸಿದನು. ಗಾಡಿಯು ಹೊರಟಿತು. ನಾನು ಕಿಟಕಿಯ ಹತ್ತಿರ ಕುಳಿತಿದ್ದೆನು. ನನ್ನ ಕಣ್ಣೆದುರಿನಲ್ಲಿ ಯಾವ ಮೂರ್ತಿಯೂ ಇರಲಿಲ್ಲ – ಆದರೆ ಹೃದಯದೊಳಗೆ ಮತ್ತೊಂದು ಹೃದಯದ ರೂಪವನ್ನು ಕಾಣತೊಡಗಿದೆನು. ಅದು ಈ ನಕ್ಷತ್ರ ಖಚಿತ ರಾತ್ರಿಯಂತೆ ಅನ್ಮೃತಮಯವಾಗಿ ಅವತರಿಸಿತ್ತು. ಆದರೆ ಅದನ್ನು ಹಿಡಿಯುವುದು ಸಾಧ್ಯವಾಗಲಿಲ್ಲ. ಓ ಧ್ವನಿಯೇ – ಗುರ್ತು ಹಿಡಿಯಲಾರದ ಧ್ವನಿಯೇ – ನಿಮಿಷ ಮಾತ್ರದಲ್ಲಿ ನೀನು ನನ್ನ ಚಿರಪರಿಚಯದ ಪೀಠದ ಮೇಲೆ ಬಂದು ಕುಳಿತಿರುವೆ. ನೀನು ಎಂತಹ ಆಶ್ಚರ್ಯದಿಂದ ಪರಿಪೂರ್ಣವಾದ ವಸ್ತುವು. ಚಂಚಲವಾದ ಕ್ಷುಬ್ಧ ಹೃದಯದ ಮೇಲೆ ಪುಷ್ಪದಂತೆ ಅರಳಿರುವೆ. ಆದರೂ ಅದರ ಉಬ್ಬರದಿಂದ ಎಸಳು ಕೂಡ ಬಾಡಿಲ್ಲ. ಅಪರಿಮಿತ ಕೋಮ ಲತೆಯಲ್ಲಿ ಎಳ್ಳಷ್ಟೂ ಕಚ್ಚು ಬಿದ್ದಿಲ್ಲ.

ಗಾಡಿಯು ಕಬ್ಬಿಣದ ಮೃದಂಗದ ಮೇಲೆ ತಾಳಹಾಕುತ್ತ ಹಾಕುತ್ತ ನಡೆ ಯಿತು. ನಾನು ಮನಸ್ಸಿನಲ್ಲೇ ಹಾಡನ್ನು ಕೇಳುತ್ತ ಕೇಳುತ್ತ ಕುಳಿತೆನು. ಅದ ರಲ್ಲಿ ಒಂದೇ ಒಂದು ಚರಣವಿತ್ತು – 'ಗಾಡೀತೇ ಜಾಯಗಾ ಆಛೇ " – (ಗಾಡಿ ಒಳಗೆ ಜಾಗ ಇದೆ) ಇದೆಯೇನು ? ಗಾಡಿಯಲ್ಲಿ ಜಾಗವಿದೆಯೇನು ? ಜಾಗವು ಸಿಕ್ಕುವುದಿದ್ದರೆ ಯಾರೂ ಯಾರನ್ನೂ ಗುರ್ತಿಸರು. ಆದರೂ ಆ ಗುರುತು ಅರಿಯದಿರುವಿಕೆಯು ಮಂಜಿನಂತೆ. ಅದು ಮಾಯೆ. ಅದು ಛಿನ್ನವಾದರೇನೇ ಗುರ್ತು ಅರಿಯುವುದರ ಕೊನೆಯಿರದು. ಓ ಸುಧಾಮಯ ಧ್ವನಿಯೇ – ಯಾವ ಅಪೂರ್ವ ಹೃದಯದಿಂದ ನೀನು ಹೊರಟೆ. ಅದೇನು ನನಗೆ ಚಿರ ಕಾಲದಿಂದ ಗುರುತಾಗಿರುವುದೇ ? ಜಾಗವಿದೆ ಇದೆ – ಶೀಘ್ರ ಬಾರೆಂಬ ಕರೆ

ಯಿದೆ – ಶೀಘ್ರವಾಗಿಯೆ ಬಂದಿರುವೆ. ನಿಮಿಷಮಾತ್ರವೂ ವಿಳಂಬಮಾಡಿಲ್ಲ.

ರಾತ್ರಿ ಚೆನ್ನಾಗಿ ನಿದ್ರೆ ಬರಲಿಲ್ಲ. ಬಹುಶಃ ಪ್ರತಿಯೊಂದು ಸ್ಟೇಷನ್ನಿನಲ್ಲೂ ಒಂದೊಂದು ಸಲ ತಲೆಯನ್ನು ಹೊರಕ್ಕೆ ನೀಡಿ ನೋಡುತ್ತಿದ್ದೆನು. ಭಯವಾಗತೊಡಗಿತು. ಯಾರನ್ನು ನೋಡಲಾಗಲಿಲ್ಲವೋ ಅವಳು ರಾತ್ರಿಯಲ್ಲೇ ಎಲ್ಲೋ ಇಳಿದು ಹೋದಳೋ ' ಎಂದು ಭ್ರಮಿಸಿದೆನು.

ಮರುದಿನ ಬೆಳಗ್ಗೆ ಒಂದು ದೊಡ್ಡ ಸ್ಟೇಷನ್ನಿನಲ್ಲಿ ಗಾಡಿಯನ್ನು ಬದಲಾಯಿಸಬೇಕಾಗಿತ್ತು. ನಮ್ಮದು ಫಸ್ಟ್‌ಕ್ಲಾಸ್ ಟಿಕೇಟು. ಗದ್ದಲವಿರಲಾರದೆಂದು ಮನಸ್ಸಿನಲ್ಲಿ ಭಾವಿಸಿದ್ದೆನು. ಇಳಿದು ನೋಡಿದಾಗ ಪ್ಲಾಟ್‌ಫಾರಂ ಮ್ಮಿನ ತುಂಬ ಸಾಹೇಬರುಗಳ ಆರ್‌ಡರ್‌ಲಿ (ದವಾಲಿ ಜವಾನರು) ಹಾಸಿಗೆ ಪೆಟ್ಟಿಗೆಗಳೊಡನೆ ಗಾಡಿಗಾಗಿ ಕಾಯುತ್ತಿದ್ದುದನ್ನು ಕಂಡೆನು. ಯಾರೋ ಒಬ್ಬರು ಫೌಜಿನ ದೊಡ್ಡ ಜನರಲ್ ಸಾಹೇಬರು ಸಂಚರಿಸಲು ಹೊರಗೆ ಹೊರಟಿದ್ದರಂತೆ – ಎರಡು ಮೂರು ನಿಮಿಷಗಳಲ್ಲಿ ಗಾಡಿಯು ಬಂದು ನಿಂತಿತು. ಫಸ್ಟ್‌ಕ್ಲಾಸಿನ ಆಶೆಯನ್ನು ಬಿಟ್ಟು ಬಿಡಬೇಕಾಗುವುದೆಂದು ತಿಳಿದೆನು. ತಾಯಿಯೊಡನೆ ಯಾವ ಗಾಡಿಯಲ್ಲಿ ಹತ್ತಬೇಕೆಂದು ಆಲೋಚಿಸುತ್ತಿದ್ದೆನು. ಎಲ್ಲ ಗಾಡಿಯಲ್ಲೂ ಗುಂಪು. ಗಾಡಿಯ ಬಾಗಿಲುಗಳಲ್ಲಿ ಇಣಿಕಿ ನೋಡುತ್ತ ತಿರುಗುತ್ತಿದ್ದೆನು. ಆ ಸಮಯದಲ್ಲಿ ಸೆಕೆಂಡ್ ಕ್ಲಾಸ್ ಗಾಡಿಯಿಂದ ಒಬ್ಬ ಹುಡುಗಿಯು ನಮ್ಮ ತಾಯಿಯನ್ನು ಉದ್ದೇಶಿಸಿ – 'ನೀವುಗಳು ನಮ್ಮ ಗಾಡಿಗೆ ಬನ್ನಿ – ಇಲ್ಲಿ ಜಾಗವಿದೆ ' ಎಂದು ಹೇಳಿದಳು.

ನಾನಂತೂ ಬೆಚ್ಚಿಬಿದ್ದೆ. ಆ ಆಶ್ಚರ್ಯ ಮಧುರ ಕಂಠ ಮತ್ತು ಆ ಸಂಗೀತದ ಧ್ವನಿ – "ಜಾಯಗಾ ಆಛೇ'' ಕ್ಷಣಮಾತ್ರವೂ ಕಾಲಹರಣಮಾಡದೆ ತಾಯಿಯೊಡನೆ ಗಾಡಿಯಲ್ಲಿ ಹತ್ತಿದೆನು. ಸಾಮಾನುಗಳನ್ನು ಎತ್ತಲು ವೇಳೆಯಿಲ್ಲ. ನನ್ನಂಥಹ ಕೈಲಾಗದವನು ಪ್ರಪಂಚದಲ್ಲೇ ಇಲ್ಲವೆನಿಸಿತು. ಆ ಹುಡುಗಿಯೇ ಅವಸರ ಅವಸರವಾಗಿ ಗಾಡಿಯು ಮುಂದಕ್ಕೆ ಹೋಗುತ್ತಿದ್ದ ಹಾಗೆಯೇ ಕೂಲಿಗಳ ಕೈಯ್ಗಳಿಂದ ನಮ್ಮಗಳ ಹಾಸಿಗೆ ಪೆಟ್ಟಿಗೆಗಳನ್ನು ಗಾಡಿಯೊಳಕ್ಕೆ ಎಳೆದುಕೊಂಡಳು. ನನ್ನದೊಂದು ಕ್ಯಾಮರಾವು ಸ್ಟೇಷನ್ನಿನಲ್ಲೇ ಉಳಿಯಿತು. ನೆನಪಾಗಲಿಲ್ಲ.

ಆಮೇಲೆ—ಏನು ಬರೆಯಲಿ—ನನ್ನ ಮನಸ್ಸಿನಲ್ಲಿ ಒಂದು ಅಖಂಡ ಆನಂದದ ಚಿತ್ರವಿದೆ. ಅದನ್ನು ಎಲ್ಲಿ ಆರಂಭಿಸಲಿ. ಎಲ್ಲಿ ಮುಗಿಸಲಿ. ಕುಳಿತು ಕೊಂಡು ವಾಕ್ಯದ ಮೇಲೆ ವಾಕ್ಯವನ್ನು ಹೊಸೆಯಲು ಇಚ್ಛೆಯಿಲ್ಲ.

ಈಗ ಆ ಧ್ವನಿಯನ್ನು ಕಣ್ಣಾರ ಕಂಡೆನು. ಆದರೂ ಅದು ಧ್ವನಿ ಯೆಂದೇ ಮನಸ್ಸಿಗೆ ತೋರುತ್ತಿತ್ತು. ತಾಯಿಯ ಮುಖವನ್ನು ನೋಡಿದೆನು. ಅವಳೂ ಎವೆಯಿಕ್ಕದೆ ಆ ಹುಡುಗಿಯನ್ನು ನೋಡುತ್ತಿದ್ದಳು. ಹುಡುಗಿಯ ವಯಸ್ಸು ಹದಿನಾರೋ-ಹದಿನೇಳೋ ಇರಬಹುದು – ಆದರೆ ನವಯೌವನವು ಇವಳ ತನುಮನಗಳಲ್ಲಿ ಎಲ್ಲೂ ಹೊರೆ ಹೊರಿಸಿಲ್ಲ. ಇವಳ ನಡಿಗೆಯು ಸಹಜ ದೃಷ್ಟಿಯು ನಿರ್ಮಲ. ಸೌಂದರ್ಯದ ಶುಚಿತ್ವವು ಅಪೂರ್ವ, ಇವಳಲ್ಲಿ ಎಲ್ಲೂ ಸ್ವಲ್ಪವೂ ಜಡತೆಯಿರಲಿಲ್ಲ.

ನಾನು ನೋಡಿದ್ದನ್ನು ವಿಸ್ತಾರಗೊಳಿಸಿ ಹೇಳುವುದು ನನಗೆ ಅಸಾಧ್ಯ. ಅಷ್ಟೇಕೆ ಅವಳು ಯಾವ ಬಣ್ಣದ ಬಟ್ಟೆಯನ್ನು ಯಾವ ರೀತಿಯಲ್ಲಿ ಉಟ್ಟಿದ್ದ ಳೆಂಬುದನ್ನೂ ಹೇಳಲು ನನಗೆ ಸಾಧ್ಯವಿಲ್ಲ. ಅವಳ ಉಡಿಗೆ ತೊಡಿಗೆಗಳಲ್ಲಿ ದೃಷ್ಟಿಯನ್ನು ತಮ್ಮ ಕಡೆಗೆ ಎಳೆಯುವಂಥಾ ವಿಶೇಷತ್ವವೇನೂ ಇರಲಿಲ್ಲ. ಅವಳು ತನ್ನ ಸುತ್ತಮುತ್ತಲಿನ ಎಲ್ಲರಿಗಿಂತಲೂ ಮೇಲಿನವಳಾಗಿದ್ದಳು. — ಸುಗಂಧರಾಜನ ಬಿಳಿಯ ಮೊಗ್ಗಿನ ಹಾಗೆ – ತೆಳುವಾದ ವೃಂತದ ಮೇಲೆ ನಿಂತು ಯಾವ ಗಿಡದಲ್ಲಿ ಅರಳಿದ್ದಳೋ ಅದನ್ನು ಅತಿಕ್ರಮಿಸಿ ಅರಳಿದಂತಿ ದ್ದಳು. ಅವಳೊಡನೆ ಇಬ್ಬರು ಮೂವರು ಸಣ್ಣ ಸಣ್ಣ ಹುಡುಗಿಯರಿದ್ದರು. ಅವರುಗಳೊಡನೆ ಅವಳ ಮಾತುಕತೆ-ಹಾಸ್ಯ-ನಗು ಇವುಗಳಿಗೆ ಕೊನೆಮೊದ ಲಿರಲಿಲ್ಲ. ನಾನು ಕೈಯಲ್ಲೊಂದು ಪುಸ್ತಕವನ್ನು ಹಿಡಿದುಕೊಂಡು ಅತ್ತಕಡೆ ಕಿವಿಗೊಟ್ಟು ಕುಳಿತಿದ್ದೆನು. ನನ್ನ ಕಿವಿಗೆ ಬಿದ್ದದ್ದೆಲ್ಲಾ ಹುಡುಗರೊಡನೆ ಹುಡು ಗಾಟದ ಮಾತುಗಳೇ – ಅವುಗಳಲ್ಲಿನ ವಿಶೇಷತ್ವವೇನೆಂದರೆ ವಯಸ್ಸಿನ ಅಂತರ ವಿರಲಿಲ್ಲ. ಸಣ್ಣವರೊಡನೆ ಅವಳು ಅನಾಯಾಸವಾಗಿ ಸಣ್ಣವಳಾಗಿದ್ದಳು. ಸಂಗಡ ಚಿತ್ರಗಳಿರುವ ಮಕ್ಕಳ ಕಥೆ ಪುಸ್ತಕಗಳಿದ್ದುವು. ಅವುಗಳಲ್ಲಿನ ಯಾವುದೋ ಒಂದು ಕಥೆ ಹೇಳುವಂತೆ ಅವರು ಪೀಡಿಸತೊಡಗಿದರು. ಈ ಕಥೆಯನ್ನು ಅವರು ಇಪ್ಪತ್ತು ಇಪ್ಪತ್ತೈದು ಸಾರಿ ಕೇಳಿರಲು ಸಂದೇಹವಿಲ್ಲ. ಆದರೂ ಮತ್ತೆ ಕೇಳಲು ಇಷ್ಟೇಕೆ ಆತುರಪಡುತ್ತಿರುವರೆಂಬುದು ನನಗೆ ತಿಳಿ

ಯಿತು. ಅವಳ ಸುಧಾಕಂಠದ ಮಾಯೆಯ ಕೋಲಿನಿಂದ ಮುಟ್ಟಿದ್ದೆಲ್ಲಾ ಸುವರ್ಣವಾಗುವಂತಿತ್ತು. ಹುಡುಗಿಯ ಅಂಗಾಂಗಗಳು - ಮನಸ್ಸು ಎಲ್ಲವೂ ಪ್ರಾಣದಿಂದ ತುಂಬಿದ್ದಿತು. ಅವಳ ಚಲನ, ಮಾತುಕತೆ - ಎಲ್ಲವೂ ಜೀವ ಶಕ್ತಿಯಿಂದ ತುಂಬಿ ತುಳುಕುತ್ತಿದ್ದವು. ಆ ಹುಡುಗಿಯರು ಅವಳ ಬಾಯಿಂದ ಯಾವ ಕತೆ ಕೇಳಿದರೂ ಅದು ಹೊಸದಾಗಿ ಕಾಣುತ್ತಿತ್ತು. ಅವರ ಹೃದಯದ ಮೇಲೇ ಅವಳ ಜೀವಝರಿಯು ಹಾರಿಬೀಳುತಿತ್ತು. ಅವಳ ಉತ್ಸಾಹದಿಂದ ತುಂಬಿದ ಜೀವವು ಅಂದು ನಾನು ಕಂಡ ಸೂರ್ಯಕಿರಣಗಳನ್ನು ಸಜೀವಗೊಳಿಸಿದವು. ನನ್ನ ಮನದಲ್ಲಿ ನನ್ನ ಸುತ್ತಲೂ ನನ್ನನ್ನು ಮುಚ್ಚಿಕೊಂಡಿರುವ ಆಕಾಶವು ಈ ತರುಣಿಯ ದಣಿಯದ ಮಲಿನವಾಗದ ಪ್ರಾಣದ ವಿಶ್ವವ್ಯಾಪೀ ವಿಸ್ತಾರವೆಂಬುದು ನನಗೆ ಗೋಚರವಾಯಿತು. ಮುಂದಿನ ಸ್ಟೇಷನ್ನನ್ನು ಸೇರುವೊಡನೆಯೇ ಅವಳು ತಿಂಡಿ ಮಾರುವವನನ್ನು ಕರೆದು ಖಾರದ ಕಡಲೆ ಕೊಂಡು ಹುಡುಗರೊಡನೆ ಕಲೆತು ಸಣ್ಣ ಹುಡುಗಿಯಂತೆಯೇ ಹಾಸ್ಯ ಲಲ್ಲೆಯೊಡನೆ ತಿನ್ನಲಾರಂಭಿಸಿದಳು. ನನ್ನ ಸ್ವಭಾವವು ಸುತ್ತಲೂ ಬೇಲಿ ಹಾಕಿದ ಹಾಗೆ ಇರುವಂಥಾದ್ದು. ನಾನೇಕೆ ಸಹಜರೀತಿಯಲ್ಲಿ ನಗುಮುಖದೊಡನೆ ಆ ಹುಡುಗಿಯ ಹತ್ತಿರದಿಂದ ಒಂದು ಹಿಡಿ ಹುರಿಗಾಳನ್ನು ಕೇಳಿ ತೆಗೆದುಕೊಂಡು ತಿನ್ನಬಾರದಾಗಿತ್ತು? ಕೈನೀಡಿ ನನ್ನ ಆಶೆಯನ್ನೇಕೆ ತೀರಿಸಿಕೊಳ್ಳಲಿಲ್ಲ?

ತಾಯಿಯು ಮನಸ್ಸು ಒಪ್ಪಿ ಒಪ್ಪದಂತೆ ಇತ್ತು. ಗಾಡಿಯಲ್ಲಿ ನಾನು ಗಂಡಸು ಕುಳಿತಿರುವೆನು. ಆದರೆ ಇವಳಿಗೆ ಏನೇನೂ ಸಂಕೋಚವಿಲ್ಲ; ತಿನ್ನುವುದರಲ್ಲೂ ಬರ ಬಂದವಳಂತೆ ತಿನ್ನುತ್ತಿದ್ದಾಳೆ. ಹೀಗೆ ನಡೆಯುವುದು ಮರ್ಯಾದಸ್ಥರ ಪದ್ಧತಿಯಲ್ಲವೆಂಬುದನ್ನೂ ಅರಿಯಳು. ತಾಯಿಯ ಮನಸ್ಸಿನಲ್ಲಿ ಈ ಹುಡುಗಿಗೆ ವಯಸ್ಸಾಗಿದೆ - ಆದರೆ ಯಾರೂ ಸರಿಯಾಗಿ ಬುದ್ಧಿ ಕಲಿಸಿಲ್ಲ - ಎಂದು ಅಂದುಕೊಂಡಳು. ನಮ್ಮ ತಾಯಿಗೆ ಅಕಸ್ಮಾತ್ತಾಗಿ ಯಾರೊಡನೆಯಾದರೂ ಮಾತನಾಡುವುದೆಂದರೆ ಆಗದ ಕೆಲಸ. ಜನರ ಸಹವಾಸದಿಂದ ದೂರದಲ್ಲಿರುವುದೇ ಅವಳ ಸ್ವಭಾವ. ಈ ಹುಡುಗಿಯ ಪೂರ್ವೋತ್ತರಗಳನ್ನು ವಿಚಾರಿಸಲು ಅವಳಿಗೆ ಬಹು ಆಶೆಯಿತ್ತು. ಆದರೆ ಸ್ವಭಾವಿಕ ಬಾಧೆಯಿದ್ದುದರಿಂದ ಅದು ಸಾಧ್ಯವಾಗಲಿಲ್ಲ.

ಈ ವೇಳೆಗೆ ಗಾಡಿಯು ಒಂದು ದೊಡ್ಡ ಸ್ಟೇಷನ್ನಿಗೆ ಬಂದು ನಿಂತಿತು. ಆ ಜನರಲ್ ಸಾಹೇಬರ ಜೊತೆಗಾರರು ಕೆಲವರು ಈ ಸ್ಟೇಷನ್ನಿನಲ್ಲಿ ಹತ್ತಲು ಯತ್ನಿಸುತ್ತಿದ್ದರು. ಗಾಡಿಯಲ್ಲಿ ಎಲ್ಲೂ ಜಾಗವಿರಲಿಲ್ಲ. ಬಾರಿಬಾರಿಗೆ ನಮ್ಮ ಗಾಡಿಯ ಇದುರಿನಲ್ಲಿ ತಿರುಗಲಾರಂಭಿಸಿದರು. ಅಮ್ಮನು ಬಹು ಭಯಪಟ್ಟಿದ್ದಳು. ನನಗೂ ಮನಸ್ಸಿನಲ್ಲಿ ನೆಮ್ಮದಿಯಿತ್ತೆಂದು ಹೇಳಲು ಸಾಧ್ಯವಿಲ್ಲ.

ಗಾಡಿಯು ಹೊರಡಲು ಸ್ವಲ್ಪ ಹೊತ್ತಿರುವಾಗ ಒಬ್ಬ ದೇಶೀಯ ರೈಲ್ವೇ ಕೆಲಸಗಾರನು ಹೆಸರು ಬರೆದಿದ್ದ ಎರಡು ರಟ್ಟುಗಳನ್ನು ಗಾಡಿಯಲ್ಲಿನ ಎರಡು 'ಬೆಂಚು'ಗಳ ತಲೆಯ ಬಳಿ ಸಿಕ್ಕಿಸಿಬಿಟ್ಟು ನನ್ನೊಡನೆ - ಈ ಗಾಡಿಯ ಎರಡು ಬೆಂಚುಗಳು ಮುಂಚಿನಿಂದಲೇ ಇಬ್ಬರು ಸಾಹೇಬರಿಗಾಗಿ ರಿಸರ್ವ್ ಆಗಿದೆ. ನೀವು ಬೇರೆ ಗಾಡಿಗೆ ಹೋಗಬೇಕಾಗುತ್ತೆ' ಎಂದು ಹೇಳಿದನು.

ನಾನು ಅವಸರ ಅವಸರವಾಗಿ ಗಾಬರಿಯಿಂದ ಎದ್ದು ನಿಂತೆನು. ಆ ಹುಡುಗಿಯು ಹಿಂದಿಯಲ್ಲಿ 'ನಾನು ಗಾಡಿ ಬಿಡುವುದಿಲ್ಲ' ಎಂದಳು.

ರೈಲ್ವೆ ಕೆಲಸಗಾರನು ಸ್ವಲ್ಪ ದರ್ಪದಿಂದ 'ಬಿಡದಿದ್ದರೆ ಬೇರೆ ದಾರಿಯಿಲ್ಲ' ಎಂದು ಹೇಳಿದನು.

ಆದರೆ ಹುಡುಗಿಯು ಅಲ್ಲಿಂದ ಅಲ್ಲಾಡುವ ಲಕ್ಷಣವು ಕಾಣದಿರಲು, ಅವನು ಇಳಿದುಹೋಗಿ ಆಂಗ್ಲ ಸ್ಟೇಷನ್ ಮಾಸ್ಟರನ್ನು ಕರೆತಂದನು—ಆತನು ಬಂದು ನನ್ನೊಡನೆ—'ನನಗೆ ಬಹಳ ವ್ಯಸನವಾಗುತ್ತೆ. ಆದರೆ ನೋಡಿ ಉಪಾಯವಿಲ್ಲ........'

ಅದನ್ನು ಕೇಳಿ—''ನಾನು ಕೂಲೀ - ಕೂಲೀ " ಎಂದು ಕೂಗಲಾರಂಭಿಸಿದೆನು. ಹುಡುಗಿಯು ಎದ್ದುನಿಂತು ಎರಡು ಕಣ್ಣುಗಳಿಂದಲೂ 'ಬೆಂಕಿಯನ್ನು ಕಾರುತ್ತ' ''ಊಹೂಂ - ನೀವು ಹೋಗಕೂಡದು - ಇದ್ದಲ್ಲೀ ಸುಮ್ಮನೆ ಕುಳಿತಿರಿ'' ಎಂದಳು.

ಹೀಗೆಂದು ಅವಳು ಬಾಗಿಲ ಹತ್ತಿರ ಹೋಗಿ ನಿಂತು ಸ್ಟೇಷನ್ ಮೇಷ್ಟರೊಡನೆ ಇಂಗ್ಲೀಷಿನಲ್ಲಿ ಮಾತಿಗಾರಂಭಿಸಿದಳು—"ಈ ಗಾಡಿಯು ಮುಂಚಿನಿಂದ ರಿಜರ್ವ್ ಆಗಿತ್ತೆಂಬ ಮಾತು ಶುದ್ಧ ಸುಳ್ಳು'' - ಎಂದು ಹೇಳಿ ಹೆಸರು ಬರೆದಿದ್ದ ರಟ್ಟುಗಳನ್ನು ತೆಗೆದು ಪ್ಲಾಟ್‌ಫಾರಂನ ಮೇಲೆ ಎಸೆದಳು.

ಈ ನಡುವೆ 'ಡವಾಲಿ ಜವಾನನೊಡನೆ ಯೂನಿಫಾರಂಧಾರೀ ಸಾಹೇಬರು ಗಾಡಿಯ ಬಳಿಗೆ ಬಂದು ನಿಂತರು. ಗಾಡಿಯಲ್ಲಿ ಸಾಮಾನುಗಳನ್ನಿಡಲು ಅವರುಗಳು ಮೊದಲು 'ಆರ್ಡರ್ಲಿ'ಗೆ ಸನ್ನೆ ಮಾಡಿದರು. ಅನಂತರ ಹುಡುಗಿಯ ಮುಖವನ್ನು ನೋಡಿ, ಅವಳ ಮಾತುಗಳನ್ನು ಕೇಳಿ, ಭಾವವನ್ನು ಕಂಡು ಸ್ಟೇಷನ್ ಮೇಷ್ಟರನ್ನು ಚುಚ್ಚಿ ಅವರನ್ನು ಪಕ್ಕಕ್ಕೆ ಕರೆದುಕೊಂಡು ಹೋಗಿ ಏನು ಹೇಳಿದರೋ ಗೊತ್ತಿಲ್ಲ. ರೈಲು ಹೊರಡುವ ವೇಳೆಯು ಮೀರಿದ್ದರೂ ಮತ್ತೊಂದು ಗಾಡಿಯು ಸೇರಿಸಲ್ಪಟ್ಟು ಅವರುಗಳು ಅದರಲ್ಲಿ ಹತ್ತಿ ಕುಳಿತ ನಂತರವೇ ರೈಲು ಹೊರಟಿತು. ಆ ಹುಡುಗಿಯು ಹುರಿಗಡಲೆ ಹುರಿಗಾಳಿನ ಮತ್ತೊಂದು ಪೊಟ್ಟಣವನ್ನು ಬಿಚ್ಚಿ ನಿಶ್ಚಿಂತತೆಯಿಂದ ಹುಡುಗರೊಡನೆ ತಿನ್ನ ತೊಡಗಿದಳು. ನಾನು ನಾಚಿಕೆಯಿಂದ ಕುಗ್ಗಿ ಕಿಟಕಿ ಹೊರಗೆ ತಲೆಹಾಕಿಕೊಂಡು ಪ್ರಕೃತಿಯ ಸೊಬಗನ್ನು ನೋಡತೊಡಗಿದೆನು.

ರೈಲು ಕಾನ್‌ಪುರವನ್ನು ಸೇರಿತು. ಹುಡುಗಿಯು ಸಾಮಾನುಗಳನ್ನು ಕಟ್ಟಿ ಸಿದ್ಧವಾಗಿದ್ದಳು. ಹಿಂದೂಸ್ಥಾನೀ ಆಳೊಬ್ಬನು ಬಂದು ಇವರುಗಳನ್ನು ಇಳಿಸಿಕೊಂಡನು.

ಅಮ್ಮನಿಗೆ ಆಗ ಸುಮ್ಮನಿರಲಾಗಲಿಲ್ಲ. "ನಿನ್ನ ಹೆಸರೇನಮ್ಮಾ" ಎಂದು ಕೇಳಿದಳು.

ಹುಡುಗಿಯು "ನನ್ನ ಹೆಸರು ಕಲ್ಯಾಣೀ'' ಎಂದಳು.

ಅದನ್ನು ಕೇಳಿ ಅಮ್ಮನೂ ನಾನೂ ಬೆಚ್ಚಿಬಿದ್ದೆವು.

''ನಿಮ್ಮ ತಂದೆ....''

''ಅವರು ಇಲ್ಲಿಯ ಡಾಕ್ಟರು. ಅವರ ಹೆಸರು ಶಂಭುನಾಥಸೇನರು.'' ಅನಂತರ ಅವರೆಲ್ಲ ಇಳಿದು ನಡೆದರು.

## ಉಪಸಂಹಾರ

ಮಾವನ ನಿಷೇಧವನ್ನು ಅಲಕ್ಷ್ಯಮಾಡಿ, ಮಾತೃ ಆಜ್ಞೆಯನ್ನೂ ತಳ್ಳಿಕೊಟ್ಟ ನಾನು ಕಾನ್‌ಪುರಕ್ಕೆ ಬಂದೆನು. ಕಲ್ಯಾಣಿಯ ತಂದೆಯನ್ನೂ ಮತ್ತು ಕಲ್ಯಾಣಿಯನ್ನೂ ಕಂಡು ಮಾತನಾಡಿದೆನು. ಕೈ ಮುಗಿದೆನು, ತಲೆ ತಗ್ಗಿಸಿ

ದೆನು - ಶಂಭುನಾಥಬಾಬುಗಳ ಹೃದಯವೂ ಕರಗಿತು - ಆದರೆ ಕಲ್ಯಾಣಿಯು —''ನಾನು ಮದುವೆ ಮಾಡಿಕೊಳ್ಳುವುದಿಲ್ಲ'' ಎಂದಳು.

"ಏತಕ್ಕೆ ?" ಎಂದು ನಾನು ವಿಚಾರಿಸಿದೆನು.

"ಮಾತೃ ಆಜ್ಞೆ" ಎಂದು ಅವಳಂದಳು.

"ಎಂಥಾ ಸರ್ವನಾಶ ! ಇಲ್ಲಿಯೂ ಮಾತುಲನಿರುವನೇನು?" ಎಂದೆನು.

ಅನಂತರ ಮಾತೃಭೂಮಿಯು ಇದೆಯೆಂಬ ಸಂಗತಿಯನ್ನರಿತೆನು. ಆ ವಿವಾಹವು ನಿಂತ ಕಾಲದಿಂದ ಕಲ್ಯಾಣಿಯು ಸ್ತ್ರೀಯರ ವಿದ್ಯಾಭ್ಯಾಸದ ವ್ರತವನ್ನು ಕೈಕೊಂಡಿರುವಳೆಂಬುದು ತಿಳಿಯಿತು.

ಆದರೆ ನಾನು ಆಶೆ ಬಿಡಲಾರದವನಾಗಿದ್ದೆನು. ಆ ಧ್ವನಿಯು ನನ್ನ ಹೃದಯದಲ್ಲಿ ಇಂದಿಗೂ ಕೇಳಿಸುತ್ತಿದೆ. ಅದು ಯಾವುದೋ ಆಚೆಯ ದಡದ ಕೊಳಲು. ನನ್ನ ಸಂಸಾರದ ಹೊರಗೆ ಹೊರಟಿತು - ಸಮಸ್ತ ಜಗತ್ತಿನ ಗೃಹಸ್ಥಾಶ್ರಮದ ಹೊರಕ್ಕೂ ಹೊರಟಿತು. ಆ ರಾತ್ರಿಯ ಕತ್ತಲೆಯಲ್ಲಿ ನನ್ನ ಕಿವಿಯನ್ನು ತಲುಪಿದ್ದ–'ಜಾಯಗಾ ಆಛೇ' (ಜಾಗವಿದೆ) ಎಂಬ ಮಾತು ನನ್ನ ಚಿರಜೀವನದ ಸಂಗೀತದ ಪಲ್ಲವಿಯಾಯಿತು. ಆಗ ನನ್ನ ವಯಸ್ಸು ಇಪ್ಪತ್ತ ಮೂರು. ಈಗ ಇಪ್ಪತ್ತೇಳಾಗಿದೆ. ಇನ್ನೂ ಆಶೆಯನ್ನು ತ್ಯಜಿಸಿಲ್ಲ, ಆದರೆ ಮಾತುಲನನ್ನು ತ್ಯಜಿಸಿರುವೆನು. ಏನೂ ಇನ್ನೂ ಅರಿಯದ ಒಂದೇ ಒಂದು ಮಗುವೆಂದು ಅಮ್ಮನು ಇನ್ನೂ ನನ್ನ ಕೈಬಿಟ್ಟಿಲ್ಲ.

ನಾನು ಮದುವೆಯ ಆಶೆಯನ್ನಿಟ್ಟುಕೊಂಡಿರಬಹುದೆಂದು ನಿಮ್ಮ ಮನಸ್ಸಿಗೆ ತೋರುತ್ತಿದೆಯಲ್ಲವೇ ? ನನ್ನ ಮನಸ್ಸಿನಲ್ಲಿರುವುದು ಆ ರಾತ್ರಿಯ ಅಜ್ಞಾತಕಂಠದ ಮಧುರ ಧ್ವನಿಯ ಆಶೆ. 'ಜಾಯಗಾ ಆಛೇ ನಿಶ್ಚಯ್ ಆಛೇ '—(ಜಾಗವಿದೆ. ನಿಶ್ಚಯವಾಗಿಯೂ ಇದೆ) ಇಲ್ಲವಾದರೆ ನಿಲ್ಲುವುದೆಲ್ಲಿ? ಆದ್ದರಿಂದಲೆ ವರ್ಷಗಳ ಮೇಲೆ ವರ್ಷಗಳು ಕಳೆದರೂ ನಾನು ಇಲ್ಲಿಯೇ ನಿಂತಿರುವೆನು - ಕಾದಿರುವೆನು. ಆ ಕಂಠದ ಧ್ವನಿಯನ್ನು ಕೇಳಿ ಅವಕಾಶವಾದಾಗ ಆಕೆಯದಾಗಿ ಯಾವುದನ್ನಾದರೂ ಕೆಲಸವನ್ನು ಮಾಡಿಕೊಡುವೆನು. ಅಂತೂ

ಮನಸ್ಸೇನೋ ಇದ[illegible] ಜಾ[illegible] [illegible]ದೆಯೆನ್ನುತ್ತಿದೆ – ''ಓ ಅಪರಿಚಿತೇ;
ನಿನ್ನ ಪರಿಚಯವು ಪೂರ್ಣವಾಗಿ ಆಗಲಿಲ್ಲ. ಪೂರ್ಣವೂ ಆಗದು. ಆದ[illegible]
ನನ್ನ ಭಾಗ್ಯ ಒಳ್ಳೆಯದು. ಆದ್ದರಿಂದಲೇ ನಾನು ಜಾಗವನ್ನು ಪಡೆದಿರುವೆನು

———:———

ಮುದ್ರಕರು
ಹೆಚ್. ಎಲ್. ಪ್ರಸಾದ್, ಟೌನ್ ಪ್ರೆಸ್
ಪತ್ರಪ್ಪ ರೋಡ್, ಬೆಂಗಳೂರು ೩
೧೯೪೪.

# ಸತ್ಯಶೋಧನೆ

ಅಥವಾ

# ಗಾಂಧೀಜಿಯವರ ಆತ್ಮಕಥೆ




ಐದು ಭಾಗಗಳು,
ಎರಡು ಸಂಪುಟಗಳಲ್ಲಿ

ಬೆಲೆ
ಆರು ರೂಪಾಯಿ

| | | | |
|---|---|---|---|
| ಕಲಾವಿದನ ತ್ಯಾಗ : ಜಯಲಕ್ಷ್ಮಿ ಆರ್. ಶ್ರೀನಿವಾಸ್ | ೧ | ೦ | ೦ |
| ಹಳ್ಳಿಯ ಚಿತ್ರಗಳು : ಗೊರೂರು ರಾಮಸ್ವಾಮಿ ಅಯ್ಯಂಗಾರ್ | ೧ | ೪ | ೦ |
| ಉಪನಿಷತ್ತಿನ ಕಥೆಗಳು : ಸಿ. ರಾಜಗೋಪಾಲಾಚಾರ್ಯರು | ೦ | ೮ | ೦ |
| ಸೋಕ್ರಟೀಸ್ : ,, | ೦ | ೬ | ೦ |
| ಶ್ರೀಕೃಷ್ಣನು ತೋರಿಸಿದ ದಾರಿ : ,, | ೧ | ೦ | ೦ |
| ರಾಜಾಜಿಯವರ ಕಥೆಗಳು : ,, | ೧ | ೪ | ೦ |
| ಗೀತಾಬೋಧ : ಗಾಂಧೀಜಿ | ೦ | ೮ | ೦ |
| ವಿಜ್ಞಾನಿಗಳ ಕಥೆಗಳು : ಎಂ. ಕೆ. ನರಸಿಂಹಮೂರ್ತಿ | ೧ | ೪ | ೦ |
| ಗೀತಗಳು : ವಿ. ಸೀತಾರಾಮಯ್ಯ | ೨ | ೦ | ೦ |
| ವಿದ್ಯಾರ್ಥಿವಿಚಾರವಿಲಾಸ : ಜಿ. ಪಿ. ರಾಜರತ್ನಂ | ೧ | ೦ | ೦ |
| ಸಿಂಹಾವಲೋಕನ : ಎಚ್. ಯೋಗಾನರಸಿಂಹಂ | ೧ | ೧೨ | ೦ |

———:———

ಸತ್ಯಶೋಧನ ಪುಸ್ತಕ ಭಂಡಾರ,

ಕೋಟೆ, ಬೆಂಗಳೂರು ನಗರ